# ಅಚಲ

ತಿಂಗಳ ಪತ್ರಿಕೆ

ಬಿಡಿಪ್ರತಿ : 4 ರೂ.

ಸೆಪ್ಟೆಂಬರ್ - 2005

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 20 ಸಂಚಿಕೆ : 9

*ಸಂಪಾದಕ ಮಂಡಲಿ*

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎನ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/- ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


ಇಪ್ಪತ್ತು ವರ್ಷಗಳಿಂದಲೂ ಕ್ರಮವಾಗಿ ಪ್ರಕಟವಾಗುತ್ತಾ ಬರುತ್ತಿರುವ ''ಅಚಲ ಪತ್ರಿಕೆ'' ಓದುಗರ, ಚಂದಾದಾರರ, ಬರಹಗಾರರ ಬೆಂಬಲವನ್ನು ಬಹಳವಾಗಿ ಅಪೇಕ್ಷಿಸುತ್ತದೆ. ಈ ವೇದಿಕೆಯ ಮೂಲಕ ಮಹಿಳಾ ಚಳುವಳಿಗೆ ನಿಮ್ಮ ಧ್ವನಿ ಸೇರಿಸಿ ಪತ್ರಿಕೆಯನ್ನು ಮತ್ತು ಚಳುವಳಿಯನ್ನು ಗಟ್ಟಿಗೊಳಿಸಬೇಕೆಂಬುದು ನಮ್ಮ ಸವಿನಯ ಪ್ರಾರ್ಥನೆ.


ಅಚಲ ವಿಳಾಸ

**108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,**
**ಬನಶಂಕರಿ 3ನೇ ಹಂತ, ಬೆಂಗಳೂರು - 560 085**

ಸಂಪಾದಕೀಯ

# ಅತ್ಯಾಚಾರಕ್ಕೆ ಪರಿಹಾರವುಂಟೆ ?

ದಿನನಿತ್ಯ ಪತ್ರಿಕೆಗಳಲ್ಲಿ ಹೆಣ್ಣಿನ ಮೇಲೆ ಒಂದಾದರೂ ಅತ್ಯಾಚಾರ ನಡೆದ ಪ್ರಕರಣ ವರದಿಯಾಗುವುದು ಸಾಮಾನ್ಯ ಸಂಗತಿಯಾಗಿದೆ. ಮನೆಯೊಳಗೆ, ಹೊರಗೆ, ಕೆಲಸದ ಜಾಗದಲ್ಲಿ, ಸಂತೋಷ ಕೂಟದಲ್ಲಿ ಆಕಸ್ಮಿಕಗಳ, ನೆರೆ ಹಾವಳಿಗಳ ಸಂದರ್ಭದಲ್ಲಿ ಎಲ್ಲೆಂದರಲ್ಲಿ ಸರ್ವಾಂತರ್ಯಾಮಿಯಾದ ಈ ಮನುಷ್ಯ ವ್ಯಾಪಾರದಲ್ಲಿ ಮಾನವೀಯ ಘನತೆಗೆ ಸ್ಥಳವೇ ಇಲ್ಲವಾಗಿದೆ. ಗಂಡು-ಹೆಣ್ಣಿನ ನಡುವೆ ಆರೋಗ್ಯಕರ ಸಂಬಂಧಗಳನ್ನು ಚಿಂತಿಸುವ, ಉಳಿಸಿಕೊಳ್ಳುವ, ಬಯಸುವ ಪ್ರಕ್ರಿಯೆಗೆ ಆತಂಕ ತಂದಿದೆ. ಇತ್ತೀಚೆಗೆ ಇಮ್ರಾನಳ ಮೇಲೆ ಅವಳ ಮಾವನಿಂದ ನಡೆದ ಅತ್ಯಾಚಾರದ ನೆನಪು ಮಾಸುವ ಮೊದಲೇ ಹಲವಾರು ಅತ್ಯಾಚಾರ ಪ್ರಕರಣಗಳು ನಡೆದಿವೆ. ಹೆಣ್ಣಿನ ಮೇಲಿನ ಅತ್ಯಾಚಾರ ವಿರೋಧಿಸಿ ಮಣಿಪುರದ ಮಹಿಳೆಯರ ಬೆತ್ತಲೆ ಪ್ರತಿಭಟನೆಯ ನೆನಪು ಇನ್ನು ಮನಸ್ಸಿನಲ್ಲಿ ಅಚ್ಚೊತ್ತಿರುವಾಗಲೇ ಜಯಪುರದಲ್ಲಿ ಸೈನಿಕರಿಂದ ಬಾಲಕಿಯ ಮೇಲೆ ಅತ್ಯಾಚಾರ ನಡೆದ ಪ್ರಕರಣ ವರದಿಯಾಗಿದೆ. ಪರಿಹಾರವೇ ಕಾಣದ, ಪ್ರತಿರೋಧವೇ ಇಲ್ಲದ ಹೆಣ್ಣಿನ ಮೇಲೆ ನಡೆಯುವ ಈ ದೌರ್ಜನ್ಯದ ವಿರುದ್ಧ ಎಷ್ಟೇ ಕಠಿಣ ಕಾನೂನುಗಳನ್ನು ತಂದರೂ ಅದರಿಂದಷ್ಟೇ ಸಮಸ್ಯೆ ಬಗೆ ಹರಿಯಲಾಗದು ಎಂಬುದನ್ನು ಇತ್ತೀಚಿನ ಅತ್ಯಾಚಾರದ ಸಾವುಗಳು ದೃಢಪಡಿಸಿವೆ. ಹೆಣ್ಣಿನ ಮೇಲೆ ನಡೆಯುವ ಇಂತಹ ಕ್ರೌರ್ಯದ ನಿಲುಗಡೆಗೆ ಸರ್ವಾಂಗೀಣ ನೆಲೆಯ ಪರಿಹಾರ ಮಾರ್ಗ ಅಗತ್ಯ.

ಅತ್ಯಾಚಾರಕ್ಕೊಳಗಾದ ಹೆಣ್ಣು ಮಗಳು ಮಾನಸಿಕವಾಗಿ, ದೈಹಿಕವಾಗಿ ಜರ್ಜರಿತಳಾಗಿರುತ್ತಾಳೆನ್ನುವ ಅಂಶವನ್ನು ಸರಳವಾಗಿ ಪರಿಗಣಿಸುವಂತಿಲ್ಲ. ಈ ಸಂಬಂಧವಾಗಿ ರಾಷ್ಟ್ರೀಯ ಮಹಿಳಾ ಆಯೋಗವು ಯೋಜನೆಯೊಂದನ್ನು ರೂಪಿಸಿದ್ದು ಕೇಂದ್ರ ಸರ್ಕಾರಕ್ಕೆ ಯೋಜನೆಯ ಕರಡನ್ನು ಸಲ್ಲಿಸಿದೆ. ಇದರನ್ವಯ ಅತ್ಯಾಚಾರಕ್ಕೆ ಒಳಗಾದವರಿಗೆ ಪರಿಹಾರ ಮತ್ತು ಪುನರ್ವಸತಿ ಒದಗಿಸಲು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಅಪರಾಧ ವಿಚಾರಣೆ, ಪರಿಹಾರ ಮಂಡಲಿ ರಚಿಸುವುದರ ಬಗ್ಗೆ ಪ್ರಸ್ತಾಪವಿದೆ. ಅತ್ಯಾಚಾರಕ್ಕೆ ಒಳಗಾದವರು ಅಥವಾ ಅವರ ಕಾನೂನು ಬದ್ಧ ಉತ್ತರಾಧಿಕಾರಿಗಳು ಜಿಲ್ಲಾ ಮಂಡಲಿಗೆ ಅರ್ಜಿಸಲ್ಲಿಸಬಹುದಾಗಿದೆ. ಕನಿಷ್ಠ ಪರಿಹಾರ ಮೊತ್ತ ಎರಡು ಲಕ್ಷ ರೂ.ಗಳಾಗಿದ್ದು ಗರಿಷ್ಠ ಐದು ಲಕ್ಷ ರೂಪಾಯಿಗಳಾಗಿರುತ್ತದೆ ಎಂದು ಆಯೋಗದ ಅಧ್ಯಕ್ಷೆ ಗಿರಿಜಾ ವ್ಯಾಸ್ ಅವರು ತಿಳಿಸಿದ್ದಾರೆ. ಈ ಪರಿಹಾರ ನಿಧಿಯನ್ನು ವಿತರಿಸುವಾಗಲೂ ಪ್ರಕರಣದ ಗಂಭೀರತೆಯನ್ನು ಅಭ್ಯಸಿಸಬೇಕು ಮತ್ತು ಜಿಲ್ಲಾ ಮಂಡಳಿಯು ಪ್ರಕರಣದ ಗಂಭೀರತೆಯನ್ವಯ ಇಪ್ಪತ್ತು ಸಾವಿರ ರೂಪಾಯಿಗಳನ್ನು ಮಧ್ಯಂತರ ಪರಿಹಾರವಾಗಿ ನೀಡಬೇಕು ಎನ್ನುವುದು ಇಲ್ಲಿ ನಿಯಮ. ಸುಪ್ರೀಂ ಕೋರ್ಟು ನಿರ್ದೇಶನದಂತೆ ಸಿದ್ಧಗೊಳಿಸಿರುವ ಈ ಯೋಜನೆಯಲ್ಲಿ ಎರಡು ಲಕ್ಷದವರೆಗಿನ ಪರಿಹಾರವನ್ನು ಜಿಲ್ಲಾ ಮಂಡಳಿ ಮತ್ತು ಅದಕ್ಕೂ ಹೆಚ್ಚಿನ ಪರಿಹಾರವನ್ನು ರಾಜ್ಯ ಮತ್ತು ಕೇಂದ್ರ ಮಂಡಳಿಗಳು ವಹಿಸಿಕೊಳ್ಳಬೇಕು ಎಂದು ಸೂಚಿಸಲಾಗಿದೆ. ಕೇಂದ್ರದ ಬಜೆಟ್ ನೆರವಿನೊಂದಿಗೆ ರಾಷ್ಟ್ರೀಯ ಅತ್ಯಾಚಾರ ಸಂತ್ರಸ್ಥ ನೆರವು ನಿಧಿಯನ್ನು ಸ್ಥಾಪಿಸುವ ಪ್ರಸ್ತಾಪವನ್ನು ಈ ಯೋಜನೆಯಲ್ಲಿ ಸೇರಿಸಲಾಗಿದೆ. ಈ ಯೋಜನೆಯನ್ನು ಆಯೋಗವು ರೂಪಿಸುವಾಗ ಅತ್ಯಾಚಾರಕ್ಕೆ ಒಳಗಾದ ಹಲವಾರು ಯುವತಿಯರ ಅಭಿಪ್ರಾಯವನ್ನು ಆಯೋಗವು ಸಂಗ್ರಹಿಸಿತ್ತು.

ದುರದೃಷ್ಟವಶಾತ್ ಅತ್ಯಾಚಾರಕ್ಕೊಳಗಾದ ಮಹಿಳೆಯ ಅಥವಾ ಅವಳ ಕುಟುಂಬದವರ ಹಿತದೃಷ್ಟಿಯಿಂದ ಈ ಯೋಜನೆ ರೂಪಿತವಾಗಿರುವುದಾದರೂ ಇಂತಹ ಒಂದು ಪ್ರಯತ್ನವನ್ನು ಸ್ವಾಗತಿಸುವುದರ ಜೊತೆಗೆ ಅತ್ಯಾಚಾರವೇ ನಡೆಯದಂತಹ, ಕಡಿಮೆಯಾಗುವಂತಹ ಪರಿಸ್ಥಿತಿಯ ನಿರ್ಮಾಣದತ್ತ ಪ್ರಯತ್ನಗಳು ಹೆಚ್ಚು ಕೇಂದ್ರೀಕೃತವಾಗಬೇಕು. ಈ ಹಿಂದೆ ಅತ್ಯಾಚಾರದ ಸಂಖ್ಯೆಯು ಹೆಚ್ಚಿದಾಗ ನಮ್ಮ ಮಾಜಿ ಕೇಂದ್ರ ಮಂತ್ರಿಗಳಾದ ಅದ್ವಾನಿಯವರು ಅತ್ಯಾಚಾರಿಗೆ ಗಲ್ಲುಶಿಕ್ಷೆಯನ್ನು ವಿಧಿಸಬೇಕೆಂದಿದ್ದರು. ಇಂತಹ ಶಿಕ್ಷೆಗಳಷ್ಟರಿಂದಲೇ ಅತ್ಯಾಚಾರಗಳು ಕಡಿಮೆಯಾಗುವುದಿಲ್ಲ ಎಂಬುದನ್ನು ಗಮನಿಸುವುದರ ಜೊತೆಗೆ ಹೆಣ್ಣು ಯಾವಾಗಲೂ ತನ್ನನ್ನು ಆಕ್ರಮಿಸಬಹುದು, ಮೇಲೆರಗಬಹುದು, ಎಂಬ ಭಯದಿಂದ ಮುಕ್ತವಾಗಬೇಕಾದ್ದು ಅಗತ್ಯವಾಗಿದೆ. ಇಲ್ಲದಿದ್ದರೆ ಸಮಾಜದ ಎಲ್ಲ ಬೆಳವಣಿಗೆಯಲ್ಲಿ ಅವಳು ಸಂಪೂರ್ಣವಾಗಿ ತೊಡಗಿಕೊಳ್ಳುವುದು ಕಷ್ಟವಾಗುತ್ತದೆ. ದಕ್ಷಿಣ ಆಫ್ರಿಕಾದಲ್ಲಿ ಅತ್ಯಾಚಾರಿಯ ಶಿಶ್ನಕ್ಕೆ ಚುಚ್ಚಿ, ನೋವುಂಟು ಮಾಡುವ ಕಾಂಡೋಮ್‌ನ್ನು ಕಂಡುಹಿಡಿದಿರುವ ಸುದ್ದಿ ಬಂದಿದೆ. ಆದರೆ ಇಂತಹ ಗರ್ಭನಿರೋಧಕವನ್ನು ಧರಿಸಿದ ಮಹಿಳೆ ಸದಾ ಯುದ್ಧಕ್ಕೆ ಸನ್ನದ್ಧಳಾಗುವ ಮನಃಸ್ಥಿತಿಯಲ್ಲಿರುವಂತೆ ಬದುಕುವ ಅನಿವಾರ್ಯತೆ ಊಹಿಸುವುದೂ ಕಷ್ಟ. ಇದು ಹೆಣ್ಣಿನ ಸಮಸ್ಯೆಯೇ ಆದರೂ, ಅದರ ಪರಿಹಾರ ಹೆಣ್ಣಿನಿಂದಲೇ ಸಾಧ್ಯ, ಎನ್ನುವ ಆಲೋಚನೆಯೂ ತಪ್ಪಬೇಕಿದೆ. ಅತ್ಯಾಚಾರ ಯಾವುದೇ ಸಮಾಜಕ್ಕೂ ಕ್ಯಾನ್ಸರ್ ಹುಣ್ಣಿದ್ದಂತೆ. ಈ ದಿಕ್ಕಿನಲ್ಲಿ ಸೂಚಿಸುವ ಯಾವುದೇ ಪರಿಹಾರವೂ ನೋವಿನ ತೀವ್ರತೆ ಕಡಿಮೆ ಮಾಡುವಂತಹುದಷ್ಟೆ ಸಮಾಜದ ರೋಗಗ್ರಸ್ಥ ಮನಸ್ಥಿತಿ ಬದಲಾಗುವ ಕ್ರಿಯೆ ನಡೆದಾಗ ಮಾತ್ರ ಹೆಣ್ಣು-ಗಂಡಿನ ಸಂಬಂಧಕ್ಕೆ ಅರ್ಥ ಬರುತ್ತದೆ. ಇಡೀ ಸಮಾಜಕ್ಕೆ ಘನತೆ ಹೆಚ್ಚುತ್ತದೆ.

*- ಎನ್. ಗಾಯತ್ರಿ*

# ಎರಡು ಪತ್ರಗಳು

-ನಂಜನಗೂಡು ತಿರುಮಲಾಂಬ

## (ಊ) ತಲ್ಲಕುಟ್ಟಿಯು ತನ್ನ ಚಿಕ್ಕಮ್ಮನಿಗೆ ಬರೆದ ಪತ್ರಿಕೆ*

ಹಲಸೂರು ಪೇಟೆ
ಬೆಂಗಲೂರು ಸಿಟಿ

ಪ್ರಿಯ ಚಿಕ್ಕಮ್ಮ! (ಅಬ್ಬಿ)

ನಿಮ್ಮ ಕಾರ್ಡು ಕೈಸೇರಿತು. ಇದೇ ಮಾರ್ಚಿ ತಿಂಗಳಲ್ಲಿ ನಮ್ಮ ಕ್ಲಾಸ್ ಎಗ್ಜಾಮಿನೇರ್ಷ (ವರ್ಗ ಪರೀಕ್ಷೆ) ಇದ್ದುದರಿಂದಲೂ, ಪಾಠಗಳು ಬಹುವಾಗಿದ್ದು ಬಿಡುವು ಸ್ವಲ್ಪವೇ ಇದ್ದುದರಿಂದಲೂ ನಾನು ನಿಮಗೆ ಕೂಡಲೇ ಉತ್ತರವನ್ನು ಕೊಡಲಿಲ್ಲ. ಬೇರೆಯಾಗಿ ಭಾವಿಸಬಾರದು. ದೇವರ ದಯೆಯಿಂದ ಈ ಸಾರೆ ನನಗೆ ಪ್ರಮೋರ್ಷ (V ಫಾರಮಿಗೆ) ಆಯಿತೆಂದರೆ, ಮುಂದಿನ ವರ್ಷ ಸ್ಕೂಲ್ ಫೈನಲ್ ಪರೀಕ್ಷೆಯಲ್ಲಿ ಹೇಗಾದರೂ ಕಷ್ಟಪಟ್ಟು (ತೇರ್ಗಡೆ) ಪಾಸಾಗುವೆನೆಂಬ ನಂಬಿಕೆಯಿದೆ. ನಮ್ಮ ಜನರು ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವ ವಿಷಯದಲ್ಲಿ ತುಂಬ ದುರ್ಲಕ್ಷ್ಯ ಮಾಡುತ್ತಾರೆ. ಇದು ದೇಶಕ್ಕೂ ತಮಗೂ ಇಷ್ಟು ಹಾನಿಕರವೆಂಬುದು ಅವರಿಗೆ ಗೊತ್ತಿಲ್ಲ. ಹೆಂಗಸರು ವಿದ್ಯೆಯನ್ನು ಕಲಿತರೆ ತಮಗೆ ಮಾನ ಮರ್ಯಾದೆಗಳುಳಿಯವೆಂದೂ ''ಹಾಳೂರಿಗೆ ಉಳಿದವನೇ ಗೌಡ'' ಎಂಬ ಗಾದೆಯಂತೆ ಹೆಂಗಸರು ಮೂಢರಾಗಿದ್ದಾರೆ ತಾವು ಅವರಿಗೆ ಸಾಕ್ಷಾತ್ ಬೃಹಸ್ಪತಿಗಳೇ ಆಗಿರುವಂತೆ ಕಾಣಿಸಿಕೊಳ್ಳಬಹುದೆಂದೂ ಸ್ವಾರ್ಥವನ್ನು ಚಿಂತಿಸಿ, ಈ ಗಂಡಸರು ನಮ್ಮ ಹೆಂಗಸರಿಗೆ ವಿದ್ಯೆಯನ್ನು ಕಲಿಸಿಲ್ಲ. ವಿದ್ಯಾಭ್ಯಾಸಕ್ಕಂತೂ ಅವಕಾಶಕೊಟ್ಟಿಲ್ಲವೆಂದರೆ ಉಳಿದ ವಿಷಯದಲ್ಲಿಯಾದರೂ ಅವರನ್ನು ಸರಿಯಾಗಿ ನೋಡಿಕೊಳ್ಳುತ್ತಿರುವರೋ-ಎಂದರೆ ಸೊನ್ನೆ! ಅವರಿಗೆ ಮಾತೆತ್ತಿದರೆ ಬಾಯಿಕಟ್ಟುವಿಕೆಯ (ವಾಗ್ಬಂಧನಶಾಸನ) ಕಟ್ಟಲೆ-ಕಾಯದೆಯೊಂದಿದ್ದೇ ಇದೆ. 'ಮೊದಲೇ ಮೌಢ್ಯ, ಮೇಲೆ ಭಯ' ಇವೆರಡೂ ಸೇರಿದರೆ, ಪಾಪ ! ಹೆಂಗಸರು ಏನುಮಾಡಬಲ್ಲರು ? ಹೆಂಗಸರು ಗಾಣದ ಎತ್ತಿನಂತೆ ದುಡಿಯುವುದೊಂದೇ ಗಂಡಸರಿಗೆ ಇಷ್ಟವಾದುದು. ಆದರೆ, ಈಚೀಚೆಗೆ ನಮ್ಮ ಹಿತಚಿಂತಕರಾದ ಸುಧಾರಕರು ತಾವು ಚನ್ನಾಗಿ ಕಣ್ದೆರೆದು ನೋಡಿ, ನಮ್ಮವರ ಪರಿಸ್ಥಿತಿಗಳನ್ನು ತಿಳಿದುಕೊಂಡು ಮರುಕಗೊಂಡು ಕಾಳರಾತ್ರಿಯಲ್ಲಿಯೇ ಸಿಕ್ಕಿಬಿದ್ದು ಕಳವಳ ಪಡುತ್ತಿರುವ ಲಲನೆಯರನ್ನು ಬಲು ಹಿಂದೆತ್ತಿತಂದು ಬೆಳಕಿನಲ್ಲಿ ನಿಲ್ಲಿಸುತ್ತಿರುವರು. ಅಂತಹ ಉಪಕಾರಿಗಳಿಗೆಲ್ಲಾ ನಾವೆಷ್ಟು ಕೃತಜ್ಞರಾಗಿದ್ದರೂ ಸ್ವಲ್ಪವೇ ಸರಿ. ಅವರ ಉಪಕಾರದ ಪ್ರತಿಫಲವೆಂದು, ಈಗ ನಮ್ಮ ಸ್ತ್ರೀಯರಿಗೇ ಲಲಾಮೆಯರಾಗಿ ಎಷ್ಟೋಮಂದಿ ವಿದ್ಯಾಭ್ಯಾಸದಿಂದ ಡಿಗ್ರಿಗಳನ್ನು ಪಡೆದು, ಯಾವ ಬಗೆಯಾದ ಬುದ್ಧಿ ಕುಶಲತೆ-ಕಲಾಕೌಶಲ್ಯಗಳಲ್ಲಿಯೂ ಸ್ತ್ರೀಯರು ಪುರುಷರಿಗೆ ಕಡಿಮೆಯವರಲ್ಲವೆಂಬಂಶವನ್ನೂ ಪುರುಷರೂ ನಾಚಿ, ತಲೆ ತಗ್ಗಿಸುವಂತಹ ಪಾಂಡಿತ್ಯವು ಸ್ತ್ರೀಯಲ್ಲಿರುವುದನ್ನೂ ಎತ್ತಿ ತೋರಿಸುತ್ತಿರುವಂತೆ ಪ್ರಕಾಶಿಸುತ್ತಿರುವರು. ಒಬ್ಬೊಬ್ಬರು ಮಹಿಳೆಯರು ಸೀಮಾಂತರವನ್ನು ದಾಟಿಯೂ ವಿದೇಶವನ್ನೇ ಸೇರಿಯೂ ತಮ್ಮ ಹೆಸರುವಾಸಿಯನ್ನು ಕೇಳಿ ಜಗತ್ತೇ ಕೌತುಕ ಪಡುವಂತೆ ಮಾಡುತ್ತಿರುವರು. ಇರಲಿ-ಮೇಲೆ ಹೇಳಿದಂಥ ಮಹಾತ್ಮರಿಂದಲೇ ನನಗೂ ಅಭಿವೃದ್ಧಿಗೆ ದಾರಿಯಾಗಿ, ನಾನೂ ನಾಲ್ವರ ಜತೆಯಲ್ಲಿ ಸೇರಲು ಅರ್ಹತೆಯನ್ನು ಪಡೆಯುವಂತಾದೆನು. ಇಲ್ಲವಾಗಿದ್ದರೆ, ಪ್ರಿಯ ಚಿಕ್ಕಮ್ಮನವರೇ ! ನನ್ನನ್ನಾರು ಕೇಳುತ್ತಿದ್ದರು? ಮೊದಲೇ ಕೈಹಿಡಿದವರೇ ಮೋಸಮಾಡಿ ಬಿಟ್ಟು ಹೋದರು. ಕೈಹಿಡಿದವರನ್ನು ಕಳೆದುಕೊಂಡಮೇಲೆ ಅವಳಿಗಿನ್ನಾರು ಹಿತರಾದಾರು ? ಹೆತ್ತವರೂ ಒಂದೊಂದುವೇಳೆ ಸಿಟ್ಟೇರಿ ಹೊರಗಟ್ಟುವುದುಂಟು.

ಒಂದುವೇಳೆ ನನಗೇನಾದರೂ ಹಾಗಾಗಬಹುದೋ ಎಂದು ಶಂಕೆಗೊಂಡಿದ್ದ ನನಗೆ ಮುಂದೇನು ಮಾರ್ಗವೆಂಬ ಭೀತಿಯುಂಟಾಗಿದ್ದ ವೇಳೆ, ಧೈರ್ಯವನ್ನು ಹೇಳಿ ನನ್ನನ್ನೀಸ್ಕೂಲಿಗೆ ಸೇರಿಸಿ, ವಿದ್ಯಾರ್ಥಿವೇತನಕ್ಕೂ ಅನುಕೂಲಪಡಿಸಿಕೊಟ್ಟ ಮಹೋಪಕಾರಿಗಳಿಗೆ ನಾನು ಎಷ್ಟು ಕೃತಜ್ಞಳಾಗಿದ್ದರೂ ಸ್ವಲ್ಪವೇ !

ಚಿಕ್ಕಮ್ಮನವರೇ ! ನಿಮ್ಮ ಮಗಳಿಗೆ ಸ್ಕೂಲಿಗೆ ಹೋಗುವುದನ್ನು ಬಿಡಿಸಿದುದಾಗಿಯೂ ಪಾಠಶಾಲೆಯಲ್ಲಿ ಉಪಾಧ್ಯಾಯಿನಿಯರು ಸರಿಯಾಗಿ ಪಾಠಗಳನ್ನು ಕಲಿಸುವುದಿಲ್ಲವೆಂದು ಉಪಾಧ್ಯಾಯಿನಿಯರೇ ''ಇದರಿಂದ ನಾವು ಪಡೆಯುವ ಪುರುಷಾರ್ಥ ಅಷ್ಟರಲ್ಲಿಯೇ ಇದೆ. ಉದರಂಭರಣಕ್ಕಾಗಿ ನಾವೂ ಹೀಗೆ ಈ ಚಾಕರಿಯಲ್ಲಿರಬೇಕು,'' ಹೀಗೆ ಹೇಳುತ್ತಿರುವುದರಿಂದಲೂ ಅವರೇ ಆಚಾರ ವಿಚಾರಗಳಲ್ಲಿ ವಿಪರೀತವಾಗಿರುವುದರಿಂದಲೂ ಮಗಳಿಗೆ ಈಗ ಮನೆಯಲ್ಲಿ ಮಾಡುವ ಅಭ್ಯಾಸವೇ ಶಿಕ್ಷಣವಾಗಿದೆಯೆಂದೂ ಬರೆದಿರುತ್ತೀರಿ. ಹೀಗೇಕೆ

ಮಾಡಿದಿರಿ? ಇಷ್ಟು ದಿನ ಪಟ್ಟ ಕಷ್ಟಕ್ಕೆ ಸ್ವಲ್ಪವಾದರೂ ಫಲವಾಗಬೇಡವೆ? ಮನೆಯಲ್ಲಿಯೇ ಇದ್ದರೆ ಅವರಿಗೆ ಹೊರಗಿನ ವಿಚಾರವೆಲ್ಲಾ ತಿಳಿಯುವುದೂ ಇಲ್ಲ, ಇದ್ದಕಡೆಯಲ್ಲಿಯೇ ಮೊದ್ದಾಗಿ ಕುಳಿತು ಕೊಳೆಯುತ್ತಿದ್ದರೆ, ಅಂಗಸಾಧನೆಯಿಲ್ಲದೆ ದೇಹಕ್ಕೆ ಬಲವೂ ಬರುವುದಿಲ್ಲ, ಆದರಮೇಲಂತೂ ಕಂಡೇ ಇದೆ.

ಇನ್ನು ಮೇಲಾದರೂ ತಮ್ಮ ಮಗಳು - ಕಮಲೆಯನ್ನು ಅಲ್ಲಿ ಪಾಠ ಸರಿಯಾಗಿ ನಡೆಯದಿದ್ದರೆ,- ಇಲ್ಲಿಗೆ ಕಳುಹಿಸಿರಿ, ಇಲ್ಲಿಯ ಮಿಷನರಿ ಹೆಂಗಸರು ಒಳ್ಳೆ ಮುತುವರ್ಜಿಯಿಂದ ಕಲಿಸುತ್ತಾರೆ. ಹೆಣ್ಣು ಹುಡುಗಿಯರಿಗೆ ಇಲ್ಲಿ ಎಲ್ಲಾ ವಿಧವಾದ ಸೌಕರ್ಯಗಳೂ ಇವೆ. ಮನೆ ಮಠವನ್ನು ಬಿಟ್ಟು ಬಂದು ಇಲ್ಲಿಯೇ ಇರಬೇಕೆನ್ನುವವರಿಗೆ ಇಲ್ಲಿಯೇ ವಸತಿಗೂ ಊಟಕ್ಕೂ ತಕ್ಕ ಏರ್ಪಾಡು ಕೂಡ ಆಗುತ್ತದೆ. ತಮ್ಮ ಮಗಳನ್ನು ನಮ್ಮ ಮನೆಯಲ್ಲಿರಲು ಬಿಡಬಹುದು, ಬೇಡವಾದರೆ ಹಾಸ್ಟಲಿನಲ್ಲಾದರೂ ಇರಿಸಬಹುದು. ಹೇಗೂ ಚುರುಕು ಬುದ್ಧಿಯ ಕಮಲೆಯನ್ನು ಹಾಗೆಯೇ ಮಂಕುಬುದ್ಧಿಯವಳನ್ನಾಗಿ ಮಾಡಬೇಡಿರಿ. ನನ್ನೊಡನೆ ನನ್ನ ತಂಗಿಯೂ (ಅವಳೂ ನನ್ನಂತೆಯೇ) ಮತ್ತಿಬ್ಬರು ಗಂಡನುಳ್ಳವರೂ ಓದುತ್ತಿರುವರು. ಇನ್ನಿಬ್ಬರಿಗೂ ಈ ಪರೀಕ್ಷೆಯಾಗುವವರೆಗೆ ಶೋಭನವಾಗುವಂತಿಲ್ಲ. ಇಲ್ಲಿರುವ ಹುಡುಗಿಯರೆಲ್ಲರೂ ಅಂಗಸಾಧನೆ ಮಾಡಿ (ತರ ತರದ ಆಟಗಳಲ್ಲಿ) ಒಳ್ಳೆ ಕಾಯಪುಷ್ಟಿಯನ್ನು ಹೊಂದಿರುತ್ತಾರೆ. ಪಾಠಪ್ರವಚನ ಅಭ್ಯಾಸಗಳೂ ಚೆನ್ನಾಗಿವೆ. ಇಲ್ಲಿಯ ಮುಖ್ಯೋಪಾಧ್ಯಾಯಿನಿಯರು ಬಹು ಒಳ್ಳೆಯವರು. ಆದುದರಿಂದ ಸೌ|| ಕಮಲೆಯನ್ನು ಕಳುಹಿಸುವಿರಾಗಿ ನಂಬಿದ್ದೇನೆ. ಈ ರಜಾದಲ್ಲಿ ಇಲ್ಲಿಯೂ ಕೆಲವು ದಿನವಿರಲಿ, ಕಮಲೆನ್ನು ಕಳಿಸಿರಿ. ಇಲ್ಲಿ ನಾವು ಕ್ಷೇಮ. ಅಲ್ಲಿ ಎಲ್ಲರ ಕ್ಷೇಮಕ್ಕೆ ಬರೆಯಿರಿ.

ಇತಿ-ತಮ್ಮ ಪುತ್ರಿ
ಶಲ್ಲಕುಟ್ಟಿ.

## ಶಲ್ಲಕುಟ್ಟಿಗೆ ಚಿಕ್ಕಮ್ಮನು ಕೊಟ್ಟ ಉತ್ತರ.

*ಹಳೇ ಅಗ್ರಹಾರ.*
*ಮೈಸೂರು.*

*ಶ್ರೀ|| ಶಲ್ಲಕುಟ್ಟಿಯಮ್ಮನಿಗೆ ಆಶೀರ್ವಾದ.*

ಅಮ್ಮ ನಿನ್ನ ಕಾಗದವು ಕೈಸೇರಿತು, ನಿನ್ನ ವಿದ್ಯಾಭಿಲಾಷೆಯನ್ನೂ ನಿನ್ನ ಶ್ರಮಸಹಿಷ್ಣುತೆಯನ್ನೂ ನೋಡಿ ಸಂತೋಷ-ಆಶ್ಚರ್ಯಗಳುಂಟಾಗಿರುವುವು. ಭಗವಂತನು ನಿನಗೆ ಜ್ಞಾನ, ಭಕ್ತಿ ಶ್ರೇಯಸ್ಸುಗಳನ್ನೀಯಲೆಂದು ಅನುದಿನವೂ ಪ್ರಾರ್ಥಿಸುತ್ತಿರುವೆನು.

ವರ್ಗಪರೀಕ್ಷೆಯಲ್ಲಿ ಜಯವಾಗುವುದೋ ಇಲ್ಲವೋ ಎಂದು ಸಂದೇಹ ಪಡುವುದೇಕೆ ? ನಿನಗೆ "ಪ್ರಮೋಷನ್ ಆಗಿಯೇ ಆಗುವುದು" ಎಂದು ಧೈರ್ಯವಾಗಿ ಹೇಳಬಲ್ಲೆನು. ಏಕೆಂದರೆ, ನಿನ್ನ ಸ್ವಭಾವವೂ ಒಳ್ಳೆಯದು, ಅನುವರ್ತನ ಗುಣವುಳ್ಳುದು, ಮೇಲಾಗಿ ಶಾಲಾ ಅಧ್ಯಕ್ಷರೂ ಒಳ್ಳೆಯವರೆಂದು ಹೇಳುವೆ. ಬಳಿಕ ಹೇಳುವುದೇನು ?

ಹೆಂಗಸರ ವಿದ್ಯಾಭ್ಯಾಸಕ್ಕೆ ಗಂಡಸರು ಅಡ್ಡಿ ಮಾಡುತ್ತಾರೆಂದೂ ಅವರ ದುರ್ಲಕ್ಷದಿಂದ ದೇಶಕ್ಕೆ ಎಷ್ಟೋ ಹಾನಿಯಾಗುತ್ತದೆಂದೂ ಗಂಡಸರು ಸ್ವಾರ್ಥದೃಷ್ಟಿಯಿಂದಲೇ ಸ್ತ್ರೀಯರನ್ನು ಕತ್ತಲೆಯಲ್ಲಿ ಕೊಳೆ ಹಾಕುತ್ತಿರುವರೆಂದೂ ಮೊದಲಾಗಿ ಗಂಡಸರಮೇಲೆ ದೊಡ್ಡ ಹೊರೆಯನ್ನು ಹಾಕಿ ದೂರಿ ಬರೆದಿರುತ್ತೇಯೆ. ನಿನ್ನ ಪಾಂಡಿತ್ಯಕ್ಕಾಗಿ ನಿನ್ನನ್ನು ಹೊಗಳಬೇಕೋ, ಗಂಡಸರಮೇಲೆ ಬಂದು ಬಿದ್ದಿರುವ ದೂರು-ಹೊರೆಗಾಗಿ ಮರುಕಗೊಳಬೇಕೋ, ನಮ್ಮ ಹೆಂಗಸರು ಹೊಂದುತ್ತಿರುವ ದುರ್ಗತಿಗಾಗಿ ಕಂಬನಿಗರೆಯಬೇಕೋ, ಇಲ್ಲವೆ ಗಂಡಸರು ಪಡುತ್ತಿರುವ ಪಾಡುಗಳನ್ನು ಕುರಿತು ಕರೆಕರೆ ಗೊಳಬೇಕೋ, ಮುಂದಿನ ನಮ್ಮ ಮಕ್ಕಳುಣಲಿಕ್ಕಿರುವ ಭವಣೆಯನ್ನು ನೆನೆದು ಮನದಲ್ಲಿಯೇ ಮಿಡುಕಬೇಕೋ-ಏನು ಮಾಡಬೇಕೆಂಬುದೇ ತಿಳಿಯದಂತಾಗಿದೆ. ಏಕೆಂದರೆ, ಏಕಕಾಲದಲ್ಲಿ ಒಮ್ಮೆಗೇ ಎಲ್ಲವೂ ಕಣ್ಣುಮುಂದೆ ಬಂದು ನಿಂದಂತಾಗಿ ಕಣ್ಕಟ್ಟಿ ಹೋಗಿದೆ. ಆದುದರಿಂದ ಅದಕ್ಕಾಗಿ ಏನೂ ಮಾಡಲಾರೆ.

ಶಲ್ಲಮ್ಮ ತಾಯಿ ನೀನು ನಿನ್ನ ಮನಸ್ಸಿನಲ್ಲಿದ್ದುದನ್ನು ಬಿಚ್ಚಿ ಹೇಳಿದಂತೆಯೇ, ನನ್ನ ಅನುಭವದ, ನಾನು ನೋಡಿ, ಕೇಳಿ, ಪ್ರತ್ಯಕ್ಷ ಅನುಭವಕ್ಕೆ ತೆಗೆದುಕೊಂಡ ವಿಷಯದಮೇಲಿಂದ ನಿನ್ನ ಬರವಣಿಗೆಗೆ ಸ್ಪಷ್ಟವಾಗಿಯೇ ಉತ್ತರವನ್ನು ಬರೆಯಬೇಕೆಂದಿರುವೆನು ಕೋಪಿಸಿಕೊಳ್ಳಬೇಡ. (ಅಥವಾ-ಕೋಪಿಸಬೇಡೆಂದರೆ-ನಿಮ್ಮ ಮನಸ್ಸಿಗೆ ಸೊಗಯಿಸದ ಮಾತಿಗೆ ನೀವು ಇಲ್ಲ-ಬೇಡ-ವೆಂದರೂ ಕೋಪ ಬಂದೇ ಬರುವುದು).

ಸ್ತ್ರೀಯರಿಗೆ ವಿದ್ಯಾಭ್ಯಾಸಮಾಡಿಸುವ ವಿಚಾರದಲ್ಲಿ ಪುರುಷರು ದುರ್ಲಕ್ಷ ಮಾಡುತ್ತಿರುವರೆಂಬ ಮಾತು ಅಕ್ಷರಶಃ ನಿಜವೇ ಇದೆ. ಏಕೆಂದರೆ, ಶಿಕ್ಷಣವೆಂದರೆ ಓದು ಬರೆಹವೇ ಅಲ್ಲ. ಅಷ್ಟರಿಂದಲೇ ಅವರು ಉತ್ತಮಸ್ಥಿತಿಗೆ ಬರುವದಿಲ್ಲ. ಅವರ ಉನ್ನತಿಗೆ ಉತ್ತಮಸ್ಥಿತಿಪ್ರಾಪ್ತಿಗೆ ಚಿತ್ತಶುದ್ಧಿ, ಪವಿತ್ರಾಚರಣೆಗಳೇ ಮುಖ್ಯ. ಅವುಗಳಿಗೆ ಉತ್ತಮರ ಮಾದರಿಯ ನಡೆನುಡಿಗಳನ್ನು ಮುಂದಿಟ್ಟು ಅದರಂತೆ ನಡೆನುಡಿ ಕೆಲಸಗಳನ್ನು ಕಲಿಸುವುದೇ ಶಿಕ್ಷಣವೆನ್ನಿಸುವುದು. ಪುರುಷರು ಈ ವಿಷಯದಲ್ಲಿ ಎಷ್ಟು ಮಟ್ಟಿಗೆ ಜಾಗರೂಕತೆಯನ್ನು ತೆಗೆದುಕೊಳ್ಳಬೇಕೋ ಅಷ್ಟು ತೆಗೆದುಕೊಂಡಿಲ್ಲ. ಕೆಲವರಂತೂ ಹೆಂಗಸರಿಗೆ ಕಲಿಸಬೇಕೆಂದೂ ಸಮಾನ ಸ್ವಾತಂತ್ರ್ಯವನ್ನು ಕೊಡಬೇಕೆಂದೂ ಹೇಳುತ್ತ ಅವರನ್ನು ಹುಚ್ಚುಚ್ಚಾಗಿ ಕುಣಿಸಲು ಅವಕಾಶ ಮಾಡಿಕೊಟ್ಟು ಈಗ "ಕೋಡಗ ತಾನು ಕೆಡುವದಲ್ಲದೆ ತೋಟವನ್ನೇ ಕೆಡಿಸಿ" ತೆಂಬಂತೆ ತಮ್ಮ ವಿಪರೀತಾಚರಣೆಯಿಂದ ಸ್ವಾರ್ಥವನ್ನೂ ಕೆಡಿಸಿ, ಪರಾರ್ಥವನ್ನೂ ಹಾಳುಮಾಡಿ, ನಿಂದೆಗೊಳಗಾಗಿರುವರು. ಈ ವಿಷಯವಾಗಿ ಕರ್ಣಾಟಕ ನಂದಿನಿಯಲ್ಲಿ "ಅಬಲಾ ದೌರ್ಜನ್ಯ"ವೆಂಬ ಲೇಖನದಲ್ಲಿ ಹಿತೈಷಿಣಿಯವರು ಬಹು ಚೆನ್ನಾಗಿ ಮನಸ್ಸಿಗೆ ಹಿಡಿವಂತೆ ವಿಮರ್ಶೆ ಮಾಡಿರುವರು. ಅದನ್ನು ನೋಡಿದರಾದರೂ ನೀನು ಏನೆನ್ನುವೆಯೋ ?

ಹೆಂಗಸರಿಗೆ ಬಾಯಿ ಕಟ್ಟುವಿಕೆಯನ್ನು ಕಾಯಿದೆಯಾಗಿ ಮಾಡಿಯೇ ಎಷ್ಟೋ ಮನೆಗಳಲ್ಲಿ ಅವರ ಘನಘರ್ಜನೆ ಸಹಿಸತೀರದಷ್ಟಾಗುತ್ತದೆ. ಹಾಗೆಯೇ ಬಿಟ್ಟು ಕೊಟ್ಟಿದ್ದರೆ ? ಆದರೆ, ಹೆಂಗಸರನ್ನು ಕಾಳರಾತ್ರಿಯಲ್ಲಿ ಕೆಡಹಿ ಕೊಳೆ ಹಾಕುತ್ತಿರುವರೆಂಬುದು ವ್ಯರ್ಥವಾದ ಆರೋಪ, ಅಕ್ಷರಜ್ಞಾನವಿಲ್ಲದ ಮಾತ್ರದಿಂದ ಅವರು ಕತ್ತಲೆಯಲ್ಲಿ ಕೊಳೆಯುವದಿಲ್ಲ. ನಿರಕ್ಷರಕುಕ್ಷಿಗಳೆನ್ನಿಸುವಂತಹ ಎಷ್ಟೋ ನಾರೀಮಣಿಯರು ತಮ್ಮ ಹಿರಿಯರ, ಗುರುಜನರ, ಸ್ವಾಮಿಯ ಸದುಪದೇಶ, ಸುಶಿಕ್ಷಣೆಗಳಿಂದ ಉತ್ತಮ ಗೃಹಿಣಿಯರೆನ್ನಿಸಿರುವರಲ್ಲದೆ ತಮ್ಮ ಸ್ವಾಮಿಯ ಸಕಲ ಕಾರ್ಯಗಳಿಗೂ ಸಹಾಯಕರಾಗಿ ಸಚಿವತನವನ್ನೂ ಮಾಡುತ್ತಿರುವರು. ಈಗಿನ ಪದ್ಧತಿಯಂತೆ ಸ್ಕೂಲು-ಕಾಲೇಜುಗಳಲ್ಲಿ ಅಭ್ಯಾಸಮಾಡಿ ಕಲಿತವರೆನ್ನಿಸಿದ ಅಕ್ಷರಸ್ಥರಲ್ಲಿ ಎಷ್ಟೋ ಮಂದಿ ತಮ್ಮ ಪಾಂಡಿತ್ಯದಿಂದ ಪುರುಷರಿಗೇ ಕುತೂಹಲವನ್ನುಂಟುಮಾಡುತ್ತಿರುವರಾದರೂ ಸಂಸಾರ ನಿರ್ವಹಣಕ್ಕೆ ಸಾಕಷ್ಟು ಸಮರ್ಥರೆನ್ನಿಸಿರುವವರು ವಿರಳರು. ಅಂಥವರಲ್ಲಿ ಕೆಲವರಲ್ಲಿಯಂತೂ ನಿಜವಾದ ಧರ್ಮಶ್ರದ್ಧೆ, ಉದಾರಬುದ್ಧಿ, ಸ್ತ್ರೀಜನೋಚಿತವಾದ ಮನೋನೈರ್ಮಲ್ಯ, ದಯಾಲುತ್ವ, ಸಹನಶಕ್ತಿ, ಪೂರ್ವಾಪರವಿವೇಚನೆ, ತಾರ ತಮ್ಯಜ್ಞಾನ ಇವು ಸ್ವಲ್ಪಕ್ಕೆ ಸ್ವಲ್ಪವಾದರೂ ಇರುವವೆಂದು ಹೇಳುವುದು ಕೂಡ ಸಾಹಸವೆನ್ನಿಸುವುದು. ಇಂತಹ ನವೀನ ವಿದ್ಯಾಭ್ಯಾಸದಿಂದ ನಮ್ಮ ಬಾಲಿಕೆಯರು ಯಾವದನ್ನು ಸಂಪಾದಿಸಬೇಕಾಗಿದೆ ? ಅವರಿಗೇನು ಕೊರತೆ ? ಗಂಡಸರು ದುಡಿದು ತಂದುದನ್ನು ಆಯವರಿತು ವೆಚ್ಚಮಾಡಿ, ಸಮಯಕ್ಕೆ ಒದಗುವಂತೆ ಗಳಿಸಿಟ್ಟುಕೊಂಡು, ತಮ್ಮ ತಮ್ಮ ಮನೆ, ಮಾರು, ಮಠ, ಮಕ್ಕಳುಗಳನ್ನು ಜೋಪಾನವಾಗಿಟ್ಟುಕೊಳ್ಳುವುದು, ಮನೆಯಲ್ಲಿರುವ ಅಶಕ್ತರು, ದಿನಗಳೆದವರು, ಆರ್ತರು ಇವರ ಲಾಲನ-ಪಾಲನಗಳಲ್ಲಿ ನಿರತರಾಗಿ, ದುಡಿದು ಬೇಸತ್ತು ಬರುವ ಗಂಡಸರಿಗೆ ತಮ್ಮ ಕೋಮಲ ಹೃದಯದಿಂದ ಆದರವನ್ನು ತೋರಿಸಿ, ಅವರ ಮನಸ್ಸಿಗೆ ಆಪ್ಯಾಯನವಾಗುವಂತೆ ಆರೈಕೆಯನ್ನು ಮಾಡಿಕೊಂಡರೆ ಅವರ ಕರ್ತವ್ಯವೆಲ್ಲಾ ನೆರವೇರಿದಂತೆಯೇ ಸರಿ. ಇಷ್ಟಕ್ಕೆ "ಹೈಸ್ಕೂಲು ಕಾಲೇಜುಗಳಿಗೇ ಹೋಗಬೇಕು, ಅಲ್ಲಿಯ ಅಭ್ಯಾಸಗಳನ್ನೇ ಆಚರಣೆಗೆ ತರಬೇಕು, ಕಲಿಯಬೇಕು" ಎಂದು ಹೇಳುವದು ಸಮಂಜಸವಲ್ಲ. ನಮ್ಮ ಹೆಂಗಸರ ಶಿಕ್ಷಣವೆಂತಹ ಮಾದರಿಯಲ್ಲಿರಬೇಕು, ಜನನಿಯಾಗುವವಳ ಜಾಗರೂಕತೆ ಹೇಗಿರಬೇಕು, ಸ್ತ್ರೀಯರ ಬಿಡದಂಥ ಕರ್ತವ್ಯವಾವದು, ಇವುಗಳನ್ನು - ಶಲ್ಲಕುಟ್ಟಿ ! ನೀನೂ ಕನ್ನಡವನ್ನು ಚೆನ್ನಾಗಿ ಕಲಿತಿದ್ದು ಕನ್ನಡ ಭಾಷೆಯನ್ನೇ ಐಚ್ಛಿಕವಾಗಿ ತೆಗೆದುಕೊಂಡಿರುವದರಿಂದ ಸಚಿತ್ರ ಭಾರತದ 2-3ನೇ ಸಂಪುಟಗಳನ್ನು ಸ್ವಲ್ಪ ಮುತುವರ್ಜಿಯಿಂದ ನೋಡಿದೆಯಾದರೆ ತಿಳಿಯುವೆ. ಅಷ್ಟುಮಟ್ಟಿಗೆ ಶಿಕ್ಷಣವನ್ನು ಪಡೆದರೆ ನಮ್ಮ ಬಾಲಿಕೆಯರಿಗೆ ಯಥೇಷ್ಟವಾಗುತ್ತದೆ.

ಹೆಂಗಸರು ಯಾವಾಗಲೂ ದುಡಿಯುವದೊಂದೇ ಗಂಡಸರಿಗೆ ಬೇಕಾದುದೆಂದು ಹೇಳುವೆಯಷ್ಟೆ ? ಪಾಪ ! ಹೆಂಗಸರು ದುಡಿಯುವದಕ್ಕೆ ಇಮ್ಮಡಿಯಾದ ದುಡಿತವು ಗಂಡಸರಿಗೆ ಇಲ್ಲವೇನು ? ಯಾರಿಗೆ ದುಡಿಯುವುದಿಲ್ಲ? ಗಾಳಿಗೆ ಬಾಯ್ತೆರೆದು ಕುಳಿತಿದ್ದರೆ ಹೊಟ್ಟೆ ತುಂಬುವದಿಲ್ಲವಷ್ಟೇ ? ಕಷ್ಟಪಡದೆ ಬಟ್ಟೆ ಬರೆಗಾದರೂ ದಾರಿಯೇನು ? ಇದೆಲ್ಲಕ್ಕೂ ಗಂಡಸರು ಎಷ್ಟು ಪಾಡುಪಡುವರೋ ವಿಚಾರಮಾಡು. ಹೆಂಗಸರೂ ಹಾಗೆಯೇ ಅವರಂತೆಯೇ ಸಮಾನ ಅಧಿಕಾರ, ಸ್ವಾತಂತ್ರ್ಯದಿಂದ ಮೆರೆಯಬೇಕೆಂದು ಕೆಲವರು ಅಪೇಕ್ಷಿಸುವರು. ಸುಧಾರಣೆಯ ಗಿರಿಶಿಖರವನ್ನೇರಿ ಮೆರೆವವರಂತೂ ಪ್ರತಿಯೊಂದು ಉದ್ಯೋಗಗಳಲ್ಲಿಯೂ ಹೆಂಗಸರೂ ಪಾಲುದಾರರಾಗಿ ನಿಂತಹೊರತು ಹೆಂಗಸರಿಗೆ ಸರಿಯಾದ ನ್ಯಾಯ ಸಿಕ್ಕುವದಿಲ್ಲವೆಂದೂ ಹೆಂಗಸರೆಲ್ಲರೂ ತಮ್ಮ ತಮ್ಮ ಹಕ್ಕು ಬಾಧ್ಯತೆಗಳನ್ನು ತಿಳಿದುಕೊಂಡರೆಂದರೆ, ಜೀವನಕ್ರಮವು ಸುಖವಾಗಿ ನಡೆಯುವದೆಂದೂ ಮೊದಲಾಗಿ ಹೇಳುತ್ತಿದ್ದಾರಷ್ಟೆ ? ಅದೆಂತಹ ಸ್ವರ್ಗೀಯ ಸುಖವೋ ಅದೆಂತಹ ಮಾದರಿಯ ಸಂಸಾರ, ಜೀವನ ಕ್ರಮವೋ ಹೇಳಲಿಕ್ಕಾದರೂ ಬರುತ್ತದೇನು ? ಬೇಕಾದರೆ ನಾಟಕದಲ್ಲಿ ಆಟವಾಡುವ ಬೂಟಕಗಾರರಂತೆ ಕುಣಿದು ಕೊಕ್ಕರಿಸಿ ಅದೇ ಸುಖವೆಂಬ ಭ್ರಮೆಯಿಂದ ಮೆರೆಯಬಹುದೇ ಹೊರತು, ನಿಜವಾಗಿ ನೋಡುವೆವಾದರೆ ಅದರಲ್ಲಿ ಸುಖ-ಸಮಾಧಾನಗಳು ನಮಗೆ ಬೇರೇ ಕಾಣುವದಿಲ್ಲ. ಸ್ತ್ರೀಯರ ದೇಹ ನಿರ್ಮಾಣಕ್ರಮ,

ಮನೋಧರ್ಮ-ಇವುಗಳಿಗೆ ಅನುಸರಿಸಿ, ಅವರ ಪ್ರಕೃತಿ, ಬಲ-ಇವುಗಳೂ ಇರುವುವು. ಅವರೆಷ್ಟೇ ನಿಪುಣೆಯಾರಾಗಲೀ ಎಷ್ಟೇ ದಾರ್ಢ್ಯವುಳ್ಳವರಾಗಲಿ ಸಹಾಯಕ್ಕೆ ನೆಪಮಾತ್ರಕ್ಕಾದರೂ ಒಬ್ಬ ಸಣ್ಣ ಗಂಡು ಹುಡುಗರ ಸಹಾಯದ ಕೋರಿಕೆಯಾದರೂ ಅವರಿಗೆ ಇದ್ದೇ ಇರುತ್ತದೆ. ಎಂತಹ ಸ್ವೈರವೃತ್ತಿಯವರಿಗಾದರೂ ಒಂದೊಂದುವೇಳೆಯಾದರೂ ಮನಸ್ಸು ಹಿಂತೆಗೆದು, ಸಹಾಯ ಅವಲಂಬನದ ಅಪೇಕ್ಷೆಯನ್ನು ಹೊಂದುತ್ತದೆ. ಎಂದಮೇಲೆ ಸ್ತ್ರೀಯರ ಶಿಕ್ಷಣ-ಅಭ್ಯಾಸ-ಆಚರಣಾದಿಗಳು ಪುರುಷರಿಂದ ಭಿನ್ನವಾಗಿರಬೇಕೆಂದಾಗಲಿಲ್ಲವೇ ?

ನಿಜ. ನೀನಾಡುವಂತೆ ದೇಶ-ವಿದೇಶಗಳನ್ನೆಲ್ಲಾ ಸುತ್ತಿ ವಿದ್ಯಾಪ್ರೌಢಿಮೆಯನ್ನು ಸಂಪಾದಿಸಿ, ಪುರುಷಪುಂಗವರಿಗೂ ವಿಸ್ಮಯ, ಕೌತುಕಗಳನ್ನುಂಟುಮಾಡುತ್ತಿರುವ ಮಹಿಳೆಯರೂ ಇರುವರು. ಆದರೆ, ತಾಯಿ ! ಸ್ತ್ರೀಪುರುಷರ ಆಕಾರ-ರೂಪ-ಸ್ವಭಾವಗಳಲ್ಲಿ ವ್ಯತ್ಯಾಸವಿದೆಯೇ ಹೊರತು ಅವರ ಆಚರಣೆಗಳಲ್ಲಿ ಭೇದವೇನಾದರೂ ಇರಬಹುದೇ ? ಅಂತಹ ಪ್ರಬುದ್ಧ ಮಹಿಳೆಯರಿಂದ ಅವರ ಕೈಹಿಡಿದ ಪುರುಷರು ಪಡುವ ಸುಖ-ಸೌಭಾಗ್ಯಗಳೇನು ? ಅವರ ಮನಸ್ಸಿನಂತೆಯೇ ನಡೆಯುವವರೆಗೆ ಮಾತ್ರ ಸರಸೋಕ್ತಿ-ವೈಯ್ಯಾರಗಳ ಸುರಿಮಳೆಯಾಗುತ್ತಿರಬಹುದು. ಆದರೆ ಅವರ ಸ್ವಹಸ್ತದಿಂದ ಶುಚಿಯಾಗಿಯೂ ರುಚಿಕರವಾಗಿಯೂ ಇರುವ ಪದಾರ್ಥಗಳನ್ನು ಸಿದ್ಧಪಡಿಸಿ ಇವರನ್ನು ಆಪ್ಯಾಯನಗೊಳಿಸಲಿಕ್ಕೇನಾದರೂ ಇವರಿಗೆ ಬಿಡುವುಂಟೇ ? ಮನವೊಗ್ಗುವುದೇ ? ಕಲಿತ ಹೆಂಗಸರು ಕೂಲಿಯವರಂತೆ ಒಲೆಯಮುಂದೆ ಕುಳಿತು ಕೂಳಡಲಿಕ್ಕಾದೀತೇ ? ಮಕ್ಕಳು ಮರಿಗಳನ್ನು ಎತ್ತಿಯಾಡಿಸಲಿಕ್ಕಾದರೂ ಅವರಿಗೆ ಬಿಡುವೆಲ್ಲಿಯದು ? ಬೇಕೆಂದರೆ, ಸಭೆಗಳಿಗೆ ಹೋಗಿ, ಪತಿಸೇವಾ ಕ್ರಮ, ಗೃಹಕೃತ್ಯನಿರ್ವಾಹ ಕ್ರಮ, ಸತೀಧರ್ಮ, ಸ್ತ್ರೀ ಕರ್ತವ್ಯ, ಶಿಶುಪೋಷಣ, ಬಾಲಶಿಕ್ಷಣ, ಇವುಗಳನ್ನು ಕುರಿತು ಉದ್ದುದ್ದಾಗಿಯೂ ಒಳ್ಳೆ ಉಬ್ಬಿನಿಂದಲೂ ಭಾಷಣಮಾಡಿ, ಸಭಿಕರ ಕರತಾಡನಗಳ ದೆಸೆಯಿಂದ ಕಿವಿ ಕಿವುಡಾಗುವಂತೆ ಮಾಡಿಕೊಂಡು ಬರಲಿಕ್ಕೂ ತಮ್ಮ ಪ್ರೌಢಿಮೆಗೆ ಮೆಚ್ಚಿದ ಮಹಾಜನರಿಂದ ಬಿರುದು ಬಿಲ್ಲೆಗಳನ್ನೂ ಹೊಗಳಿಕೆಗಳನ್ನೂ ಪಡೆಯಲಿಕ್ಕೂ ಅವರಿಗೆ ಅನುಕೂಲವಾಗಬಹುದು. ಹೋಗಲಿ, ಬಿಡು, ಅಂತಹವರ ಮಾತೆತ್ತಿ ನನಗಾಗ ಬೇಕಾದುದೇನು? ಬಿಟ್ಟರೆ ಮುಳುಗಿ ಹೋದುದೇನು ?

ತಾಯಿ! ನೀನೂ ಅಂತಹ ನಾಲ್ವರ ಜೊತೆಗೆ ಸೇರಲು ಅರ್ಹತೆ ಹೊಂದಿದವಳೇನು? ಪಾಪ ! ಕೈ ಹಿಡಿದವರು ಹೋದ ಬಳಿಕ ಅಂತವರಿಗೆ ಬಲವಾರೂ ಇಲ್ಲ. ಅವರ ಮನೋಧೈರ್ಯದ ಬಲವೇ ಅವರಿಗೆ ನಿಜವಾದ ಬಲ ! ಆದರೆ, ಒಂದು ಮಾತು ! ಈಗ ನೀನು ಮಾಡುತ್ತಿರುವ ಅಭ್ಯಾಸದಿಂದ ನಿನಗಾಗು ಪರಮಾರ್ಥವಾವುದೆಂದು ಹೇಳಬಲ್ಲೆಯಾ ? ಪರಮಾರ್ಥವನ್ನು ಕೇಳುವವರು-ಈಗ ಯಾರಿರುವರೆನ್ನುವೆಯೋ? ಪರಮಾರ್ಥವಿಲ್ಲದಿದ್ದರೆ ಹಾಳಾಗಲಿ, ಸ್ವಾರ್ಥವನ್ನಾದರೂ ಸರಿಯಾಗಿ ಸಾಧಿಸಿದಂತಾಯಿತೇ ? ಅದೂ ಇಲ್ಲ. ಅರ್ಧ ಆಯುಷ್ಯದವರೆಗೆ ಓದಿಯೋದಿ ಕಣ್ಣು ಕೆಡಿಸಿಕೊಂಡು ಪಡೆಯುವದೆಂದರೆ ಒಂದು ಪಾಠಶಾಲೆಯ ಉಪಾಧ್ಯಾಯಿನಿಯ ಕೆಲಸ, ಅದರ ಪ್ರತಿಫಲವೆಂದರೆ ಒಂದು ಹಿಡಿಗಾಗುವಷ್ಟು ರೊಕ್ಕ ! ಅದಕ್ಕಾಗಿ ಪಡಬೇಕಾದ ಪ್ರಯಾಸವೆಂದರೆ ಹಗಲೂ ರಾತ್ರಿಯೂ ವಿದೇಶದ ಇತಿಹಾಸ ವಿದೇಶೀಯರ ಸಾಹಸ, ಶಿಕ್ಷಣ ಕ್ರಮ ಮತ್ತೆ ಕೆಲವು ಸಣ್ಣಪುಟ್ಟ ವಿಷಯಗಳ ಟಿಪ್ಪಣಿಗಳು-ಇವನ್ನು ಓದಿಕೊಳ್ಳುವ ಬರೆದಿಡುವ ಮಾಡಿಸುವ ಕೆಲಸ ! ಈ ಸಂದರ್ಭದಲ್ಲಿ ಇವರ ಮನಸ್ಸು ಎಷ್ಟು ಸಮಾಧಾನ ಸ್ಥಿತಿಯಲ್ಲಿರಬಹುದೋ ದೇವರೇ ಬಲ್ಲ! ಇಂತಹ ಮಹೋಪಕಾರವನ್ನು, ಕೇವಲ ಹೊಟ್ಟೆ ಬಟ್ಟೆಗಳಿಗಾಗಿ ಹೊರಗೆ ಹೋಗಿ ಓದಿ, ಉದ್ಯೋಗಕ್ಕೆ ಹೋರಾಡಿ, ಸೇವಾವೃತ್ತಿಗೆ ಕೈಯೊಡ್ಡಿ ನಲಿದಾಡುವ ಮಹಾ ಭಾಗ್ಯೋದಯವನ್ನುಂಟುಮಾಡಿಕೊಡುವಂತಹ ಹೆತ್ತವರಿಗೂ ಗುರುತರಿತವರಿಗೂ ಕರುಣಾಳುಗಳಿಗೂ ಎಷ್ಟೋ ಕೃತಜ್ಞರಾಗಿರಬೇಕು. ಈ ವಿಷಯದಲ್ಲಿ ಸಣ್ಣ ಹುಡುಗಿಯರನ್ನು ಹೇಳಿ ಫಲವಿಲ್ಲ. ರೀತಿ ನೀತಿಗಳನ್ನರಿಯದೆ, ಅವರನ್ನು ಸಾಕಿ ಜೋಕೆಯಿಂದ ನೋಡಿಕೊಳ್ಳುವ ಮನವಿಲ್ಲದೆ, ಮಕ್ಕಳ ಸದ್ಯದ ಜೀವನವೊಂದರಲ್ಲಿಯೇ ಗುರಿಯಿಟ್ಟು, ಮುಂದಿನ ಎಂದರೆ ಅವರು ದಿನಗಳೆದು ಅಶಕ್ತರಾದಬಳಿಕ-ಅಥವಾ ಸರಕಾರೀ ಕೆಲಸಗಳಿಂದ ಬಿಡುಗಡೆ ಹೊಂದಿದ ಮುಂದಿನ ಅವರ ಜೀವನವು ಸುಖಕರವಾಗಿಯೂ ಸಮಾಧಾನಕರವಾಗಿಯೂ ನಡೆಯುವಂತಹ ಮಾರ್ಗವನ್ನು ಮಾಡಿಕೊಡಲಾರದೆ, ತಮ್ಮ ಕುಲದ ಗೌರವ, ಆತ್ಮಾಭಿಮಾನ, ಸ್ವಪ್ರತಿಷ್ಠೆಗಳ ಕಡೆಗೂ ಪೂರ್ಣ ಲಕ್ಷ್ಯ ಕೊಡದೆ, ಹೊಟ್ಟೆಯಲ್ಲಿ ಹುಟ್ಟಿದ, ಬೆನ್ನೊಳಗೆ ಬಿದ್ದ, ಕಾಲು ಹಿಡಿದ-ಹೆಣ್ಣು ಮಕ್ಕಳನ್ನು ಹೆರವರನ್ನಾಗಿ ಮಾಡಿ ತಾವು ಗೆದ್ದೆವೆಂದು ತಿಳಿದು ಹಿಗ್ಗುವಂತಹ ಮಹಾನುಭಾವರನ್ನು ಮಾತ್ರ ಬಗೆಬಗೆಯಾಗಿ ಕೊಂಡಾಡಲೇ ಬೇಕು.

ಶಲ್ಲಮ್ಮ ತಾಯಿ ! ನೀನು ಉಪಾಧ್ಯಾಯಿನಿಯರ ವಿಷಯವಾಗಿ ಹೇಳಿರುವ ಮಾತು ಚೋದ್ಯವಾಗಿದೆ. ಎಷ್ಟೋ ಉಪಾಧ್ಯಾಯಿನಿಯರ ಮುಖದಿಂದ ಹೊರಟ ಮಾತನ್ನೇ ನಾನು ಬರೆದಿರುವೆನು. ಮಿಷನರಿಗಳಲ್ಲದವರು ಮುತುವರ್ಜಿಯಿಂದ ಪಾಠಗಳನ್ನು ಕಲಿಸುವುದಿಲ್ಲವೆಂದೂ ಮಿಷನರಿಗಳು ಮಾತ್ರ ಅಕ್ಕರೆಯಿಂದ ಕಲಿಸುವರೆಂದೂ ನೀನು ಹೇಳುವೆ ! ಹಾಗೆಂದೇ ಒಪ್ಪಿಕೊಳ್ಳುವ. ಆದರೆ ಅದಕ್ಕೆ ಕಾರಣವೇನು ? ಉದರಂಭರಣ ಹೊರತು ಬೇರೆ ಉಪಯೋಗವಿಲ್ಲವೆಂಬ ಅಭಿಪ್ರಾಯವಿರುವುದರಿಂದಲೇ ಇತರರು ಇಂತಹ ಅಭ್ಯಾಸ ಶಿಕ್ಷಣಗಳಿಗೆ ಅಷ್ಟು ಗಮನಕೊಡುವುದಿಲ್ಲ. ಮಿಷನರಿಗಳೆಂದರೆ, ಅವರಂತೆ ನೀವೂ ಸುಧಾರಿಸಿದವರಾಗಬೇಕೆಂದೂ

ನೀವೂ ಅವರ ಶಿಷ್ಟಾಚಾರ, ಅವರ ಮತದ ಹೆಚ್ಚುವಳಿಕೆ, ಅವರ ಉಪದೇಶ ಗ್ರಂಥಗಳ ಮಹತ್ವ, ಅವರ ದೇಶೀಯರ, ದೇಶಭಕ್ತರ ಪ್ರಾಶಸ್ತ್ಯ ಅದ್ಭುತ ಪ್ರಭಾವ, ಸತತೋದ್ಯಮಗಳಲ್ಲಿ ಅವರಿಗಿರುವ ಸಹಜವಾದ ಶ್ರದ್ಧೆ ಇವುಗಳನ್ನೆಲ್ಲಾ ನೀವೂ ತಿಳಿದುಕೊಳ್ಳಬೇಕೆಂದು ಅವರು ನಿಮಗೆ ಅಕ್ಕರೆಯಿಂದ ಹೇಳುವರು.

ಸ್ವಧರ್ಮದಲ್ಲಿ ಬುದ್ಧಿಯಿಲ್ಲದವರು, ಸ್ವರೂಪವನ್ನರಿಯದವರು, ಅವರ ಮಾತಿಗೆ ಹಿಗ್ಗಿ ಅವರೇ ಸರಿಯೆಂದು ತಲೆದೂಗಿ ಕುಣಿದಾಡಬಹುದು. ಆದರೆ, ಅವರಂತೆ ತಾವೂ ಕುಣಿದರೂ ಅವರ ಧರ್ಮ ರಹಸ್ಯಗಳನ್ನು ತಿಳಿಯಲಿಕ್ಕಾಗಲೀ ತಾವೂ ಅವರಂತೆಯೇ ಆಗಲಿಕ್ಕಾಗಲೀ ಶಕ್ಯವಿಲ್ಲ. ಅಂತಹ ಶಿಕ್ಷಣ ಅಭ್ಯಾಸಗಳಿಂದ ನಮ್ಮ ಹುಡುಗಿಯರು ಗಳಿಸಬೇಕಾದುದೇನಿದೆ ? ನಮಗದಾವುದೂ ಬೇಡ. ನಮ್ಮ ಕಮಲೆ ಒಳ್ಳೆ ನಿರ್ವಾಹಶಾಲಿ ಹೆಂಗಸೆಂದೂ ನಿಜವಾದ ಗೃಹಿಣಿಯೆಂದೂ ಪತಿಗೆ ಅನುಕೂಲೆಯಾದ ಪತ್ನಿಯೆಂದೂ ವಿಹಿತವನ್ನರಿತ ಮಾತೆಯೆಂದೂ ಹೇಳುವಂತಾದರೆ ಸಾಕು. ಹಾಗಾಗಲಿಕ್ಕೆ ಹೈಸ್ಕೂಲ್ ಕಾಲೇಜುಗಳ ಅಭ್ಯಾಸವು ಬೇಕಾಗಿಲ್ಲ. ತಕ್ಕಮಟ್ಟಿಗೆ ಅಕ್ಷರಜ್ಞಾನ, ಸಾಮಾನ್ಯವಾದ ಲೆಕ್ಕಾಚಾರ, ತಕ್ಕಮಟ್ಟಿಗೆ ಪದಾರ್ಥಗಳ ಗುಣದೋಷವಿಚಾರ ಇವುಗಳು ತಿಳಿಯುವ ಮಟ್ಟಿಗೆ ಅಭ್ಯಾಸವೂ ವ್ಯಾಸಂಗವೂ ಆದರೆ ಸಾಕು. ಅದಕ್ಕೂ ಹೆಚ್ಚಾಗಿ ಬೇಕೆಂದರೆ, ಸ್ವದೇಶದ ಇತಿಹಾಸ, ಧರ್ಮಸೂಕ್ಷ್ಮ, ಪುರಾಣ-ಮತಗಳ ಸಾರ, ಇವುಗಳನ್ನೂ ಪ್ರಾಪಂಚಿಕ ವ್ಯವಹಾರಗಳನ್ನೂ ಅವಕಾಶಾನುಸಾರ ತಿಳಿದುಕೊಳ್ಳಬಹುದು. ಇನ್ನು ಇದಕ್ಕೂ ಹೆಚ್ಚಾಗಿ ಅವಳು ಹೊರಗಿನ ವಿಚಾರವೇನನ್ನು ತಿಳಿಯಬೇಕು ? ಬೈಸಿಕಲಿನಲ್ಲಿ ತಿರುಗುವ ಭಾಮೆಯರ ವರ್ತನವನ್ನರಿಯಬೇಕೋ ? ಅಂಗಡಿ ಮುಂಗಟ್ಟುಗಳಿಗೆ ಇಷ್ಟವಾದವರೊಡನೆ ಹೋಗಿಬರುವ ಅಂಗನೆಯರ ಆಚರಣವನ್ನರಿಯಬೇಕೋ ? ಪ್ರಪಂಚದ ಕೋಲಾಹಲವನ್ನು ತಿಳಿದುಕೊಳ್ಳಬೇಕೋ ? ಏನು ? ಅಂಗಸಾಧನೆಯೆಂದರೆ ಯಾವುವು ? ಟೆನ್ನಿಸ್, ಬ್ಯಾಡ್‌ಮಿಂಟನ್ ಇವುಗಳೇ ಅಹುದಷ್ಟೇ ? ಆದರೆ ಅಷ್ಟರಿಂದ ಸಂಚಾರ-ವೇಗಗಮನಶಕ್ತಿ ಬರಬಹುದು. ಕೈಗಳಿಗೆ ಬೀಸಿ ಎಸೆಯುವ, ಗುರಿ ಹೊಡೆಯುವ ಬಲವುಂಟಾಗಬಹುದು. ಆದರೆ, ಲಂಘನಶಕ್ತಿಯೂ ಪಟುತ್ವವೂ ಬರಬೇಕಾದರೆ ಗಂಡಸರು ಆಡುವಂತೆ 'ಫುಟ್‌ಬಾಲ್ ಕ್ರಿಕೇಟ್'ಗಳೂ ಬೇಡವೇ ? ಅದರ ಜೊತೆಗಂತೂ ಕಾಫಿ, ಕುಡಿಗಳಿಗಾಗಿ 'ಕ್ಲಬ್ಬು'ಗಳಿಗೆ 'ಮೆಂಬರು'ಗಳಾಗುವುದೂ ಮನೋಲ್ಲಾಸಕ್ಕಾಗಿ ಆಂಗ್ಲ ನರ್ತನದಲ್ಲಿ ಭಾಗ ತೆಗೆದುಕೊಳ್ಳುವುದಾಗಲೀ-ನೋಡಲಿಕ್ಕೆ ಹೋಗುವದಾಗಲೀ ಬೇಕೇಬೇಕು. ಆಗಲಿ, ಆದರೆ ಚುರುಕು ಬುದ್ಧಿಯ ನಮ್ಮ ಕಮಲೆಗೆ ಅಂತಹ ವಿಪರೀತ ಸೌಕರ್ಯಗಳೊಡಗೊಂಡ ಸ್ಥಳದ ವಾಸವೂ ಅಭ್ಯಾಸವೂ ಬೇಕಾಗಿಲ್ಲ. ಸರ್ಕಾರದವರು ಯಾವ ಸದುದ್ದೇಶದಿಂದ ಬಾಲಿಕಾಪಾಠಶಾಲೆಯನ್ನೇರ್ಪಡಿಸಿರುವರೋ, ಅವರ ಉದ್ದೇಶವು ಸಾಫಲ್ಯವಾಗುವಂತಹ ಪ್ರಾಥಮಿಕ ಶಿಕ್ಷಣವು ಮಾತ್ರ- ನಮ್ಮ ಕಮಲೆಗೂ ಅವಳಂತಿರುವ ಇತರ ಹುಡುಗಿಯರಿಗೂ ಲಭಿಸಿದರೆ ಸಾಕು. ಮನೆಬಿಟ್ಟು ಸ್ವಜನರನ್ನು ಬಿಟ್ಟು ಅಲ್ಲಿ ಬಂದು ಕಲಿತು ಗಂಡನಿಗೆ ಅವಳು ಮಾಡುವ ಉದ್ಧಾರವಂತೂ ನಮಗೆ ಏನೂ ತಿಳಿಯಲೊಲ್ಲದು. ಗಂಡಾಂತರಗಳನ್ನು ದಾಟಿಬರುವ ಹೆಂಗಸರು ಮಾತ್ರ ಬೇಕಾದರೆ ಅಲ್ಲಿ ಅಭ್ಯಾಸಿಸಬಹುದು. ಪರೀಕ್ಷೆಯಾಗುವವರೆಗೂ ಶೋಭನವೊಲ್ಲದ ವಿದ್ಯಾಭ್ಯಾರ್ಥಿಗಳಾದ ಆ ಸೌಭಾಗ್ಯವರ್ತಿಯರ ಸಹವಾಸದಿಂದ ಆಗುವ ಪರಮೋಪಕಾರವನ್ನು ನೋಡಿ ಮುಂದೆ ಆಲೋಚಿಸಬಹುದು. ವಿವಿಧ ಅಂಗಸಾಧನೆಗಳಿಂದ ಕಾಯಪುಷ್ಟಿ ಹೊಂದಿಬಂದು, ಗೃಹಕಾರ್ಯದಲ್ಲಿ ಸ್ವಯಂದಕ್ಷತೆಯನ್ನು ಪ್ರದರ್ಶಿಸಿ ಮಾದರಿಯಾಗಿ ನಿಲ್ಲುವ ಮಹಿಳಾಮಣಿಯರನ್ನು ನೋಡಿದಬಳಿಕ ನಮ್ಮ ಹುಡುಗಿಯರನ್ನೂ ಕಳುಹಿದರಾಯಿತು. ಈಗಲಂತೂ ಬೇಕಾಗಿಲ್ಲ, ಶಲ್ಲಮ್ಮ ತಾಯಿ ! ಭ್ರಾಮಕಸ್ಥಿತಿಯಲ್ಲಿರುವ ನಿನ್ನ ತಿಳಿವಿಗೆ ತರಲಿಕ್ಕಾಗಿ ನಾನು ಇಷ್ಟು ಸ್ಪಷ್ಟವಾಗಿಯೂ ಖಂಡಿತವಾಗಿಯೂ ಬರೆಯಬೇಕಾಯಿತೇ ಹೊರತು ವಿದ್ಯಾವತಿಯರನ್ನು ಕುರಿತು ತಿರಸ್ಕಾರದಿಂದ ಹೇಳಿದ ಮಾತಿದೆಂದು ಮಾತ್ರ ತಿಳಿದು ಕೋಪಿಸಬಾರದು. ಸದ್ಯಕ್ಕೆ ಇಷ್ಟು ಸಾಕು. ಅವಕಾಶವಾದಾಗ ಮುಂದೆ ಬರೆಯುವೆನು.

*ಇತಿ, ನಿನ್ನ ಚಿಕ್ಕಮ್ಮ, ಯದುಗಿರಿ.*

*ಕನ್ನಡದ ಮೊದಲ ಪ್ರಕಾಶಕಿ ಮತ್ತು ಪತ್ರಕರ್ತೆಯೆನಿಸಿಕೊಂಡಿರುವ ದಿವಂಗತ ನಂಜನಗೂಡು ತಿರುಮಲಾಂಬರವರು 1921ರಲ್ಲಿ ಆರಂಭಿಸಿದ ಸನ್ಮಾರ್ಗದರ್ಶಿ ಮಹಿಳಾ ಮಾಸಪತ್ರಿಕೆಯಲ್ಲಿ ಪ್ರಕಟವಾಗಿರುವ ಎರಡು ಪತ್ರಗಳಿವು. ಅಕ್ಷರಲೋಕಕ್ಕೆ ತೆರೆದುಕೊಂಡ ನಮ್ಮ ಹೆಣ್ಣು ಮಕ್ಕಳು ಮತ್ತು ಅವರ ವಿದ್ಯಾಭ್ಯಾಸವನ್ನು ಕುರಿತಂತೆ ಒಂದು ಕ್ಷಕಿರಣ ಬೀರುತ್ತದೆಂಬ ಕಾರಣದಿಂದ ಈ ಪತ್ರಗಳನ್ನು ಇಲ್ಲಿ ಪ್ರಕಟಿಸಿದ್ದೇವೆ.*

# ಸ್ವತಂತ್ರ ಭಾರತ ಒಂದು ಅವಲೋಕನ

ನಮ್ಮ ಈಗಿನ ಸ್ವತಂತ್ರ ಬದುಕಿನ ಆನಂದಕ್ಕೆ ಕಾರಣರಾದ ಮಹನೀಯರಿಗೆ ಕೃತಜ್ಞತೆ ಸಲ್ಲಿಸಲು ಸದವಕಾಶ. ಮಹಾತ್ಮ ಗಾಂಧಿ, ಜವಾಹರ್‌ಲಾಲ್ ನೆಹರು, ತಿಲಕ್, ಸುಭಾಷ್ ಚಂದ್ರ ಬೋಸ್-ರಂತಹ ಅನೇಕ ಉಜ್ವಲ ದೇಶಭಕ್ತ ನಾಯಕರು ಮತ್ತು ಅವರ ಅಸಂಖ್ಯಾತ ನಿಷ್ಠಾವಂತ ಅನುಯಾಯಿಗಳು ಈ ಮಹತ್ಸಾಧನೆಯ ರೂವಾರಿಗಳು. ಈ ಎಲ್ಲಾ ಮಹನೀಯರ, ಮಹಾನ್‌ತ್ಯಾಗ ಮತ್ತು ನಿಸ್ವಾರ್ಥಶ್ರಮದ ಉತ್ಕೃಷ್ಟಫಲ ಭಾರತದ ಸ್ವಾತಂತ್ರ್ಯ. ಈ ಅವಿಸ್ಮರಣೀಯರ ಶ್ರೇಷ್ಠ ತ್ಯಾಗದ ಫಲಾನುಭವಿಗಳು ನಾವು ಅವರಿಗೆ ನಾವು ಸದಾ ಋಣಿ. ಈ ದಿನ ಅವರಿಗೆ ತಲೆಬಾಗಿ ನಮಿಸೋ, ಈ ಮಹಾತ್ಯಾಗಿಗಳು ಪ್ರತಿಪಾದಿಸಿದ ಸ್ವತಂತ್ರ್ಯದ ಧ್ಯೇಯವಾಕ್ಯ ಜಗತ್ತಿನ ಜೀವನ ಪಥವಾಗಲಿ. ಉತ್ಕೃಷ್ಟ ಭಾರತ ನಮ್ಮ ಶಪಥವಾಗಲಿ.

- ಕೃಷಿ : ಬೆಳೆ ವಿಮೆಗಾಗಿ ರೂ. 200 ಕೋಟಿಗಳು, ಬಿತ್ತರೆ ಬೀಜ ವಿತರಣೆಗೆ ರೂ. 60 ಕೋಟಿಗಳು, ಆವರ್ತ ನಿಧಿಗೆ ರೂ. 200 ಕೋಟಿಗಳು, ಕೃಷಿ ಸಂಶೋಧನೆಗೆ ರೂ. 27 ಕೋಟಿಗಳು, ಶೇಕಡ 6ರ ಬಡ್ಡಿ ದರದಲ್ಲಿ ಸಾಲ ನೀಡಲು ರೂ. 80 ಕೋಟಿ ಸಹಾಯಧನ ಒದಗಿಸಲಾಗಿದೆ. ಕೃಷಿ ಸಾಲಗಳ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಸಂಬಂಧ ರೂ. 950 ಕೋಟಿಗಳನ್ನು ಸಹಕಾರಿ ಸಂಸ್ಥೆಗಳಿಗೆ ಮರು ಪಾವತಿಸಲಾಗಿದೆ.
- ನೀರಾವರಿ : ನೀರಾವರಿ ಅಭಿವೃದ್ಧಿಗಾಗಿ ರೂ. 3,942 ಕೋಟಿಗಳ ದಾಖಲೆ ಹಣವನ್ನು ಪ್ರಸಕ್ತ 2005-05ನೇ ಸಾಲಿನಲ್ಲಿ ಹಂಚಿಕೆ ಮಾಡಲಾಗಿದೆ.
- ಆರೋಗ್ಯ : ಸ್ತ್ರೀ ಶಕ್ತಿ ತಂಡಗಳ 2.5 ಲಕ್ಷ ಪರಿಶಿಷ್ಟ ಸದಸ್ಯರಿಗೆ ಸಾರ್ವತ್ರಿಕ ವಿಮಾ ಯೋಜನೆಯೊಂದನ್ನು ಜಾರಿಗೊಳಿಸಲಾಗುವುದು. 27 ಜಿಲ್ಲೆಗಳಿಗೆ ತಲಾ ಒಂದರಂತೆ ಆಂಬುಲೆನ್ಸ್ ಸೌಕರ್ಯ ಹಾಗೂ 39 ಹಿಂದುಳಿದ ತಾಲ್ಲೂಕುಗಳ ವ್ಯಾಪ್ತಿಯ 399 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ 24 ಗಂಟೆಗಳ ನಿರಂತರ ಸೇವೆ ಕಲ್ಪಿಸಲಾಗುವುದು.
- ಶಿಕ್ಷಣ : ಪ್ರಾಥಮಿಕ-ಶಿಕ್ಷಣದ ಸಾರ್ವತ್ರೀಕರಣ ಮತ್ತು ಸಾಕ್ಷರತೆ ಪ್ರಮಾಣದಲ್ಲಿ ಸುಧಾರಣೆ ತರಲು 4,687 ಪ್ರಾಥಮಿಕ ಹಾಗೂ 2,104 ಪ್ರೌಢಶಾಲಾ ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದೆ. ಚಾಮರಾಜನಗರ ಮತ್ತು ಗುಲ್ಬರ್ಗಾ ಜಿಲ್ಲೆಯ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ಉಪಗ್ರಹದ ನೆರವಿನೊಂದಿಗೆ ದೂರದರ್ಶನ ಹಾಗೂ ರೇಡಿಯೋ ಮೂಲಕ ಮಕ್ಕಳಿಗೆ ಕಲಿಯುವ ಅವಕಾಶ ಕಲ್ಪಿಸಲಾಗಿದೆ.
- ಮೂಲ ಸೌಕರ್ಯ : ಬೆಂಗಳೂರು ಮಹಾನಗರಕ್ಕೆ ರೂ. 390 ಕೋಟಿಗಳ ಹೈ-ಟೆಕ್ ಸಿಟಿ ಯೋಜನೆ ಮತ್ತು ರೂ. 750 ಕೋಟಿ ವೆಚ್ಚದ ಪರಿಫೆರಲ್ ರಿಂಗ್ ರಸ್ತೆ ಯೋಜನೆ ಶೀಘ್ರದಲ್ಲೇ ಅನುಷ್ಠಾನ. ರೂ. 3883 ಕೋಟಿಗಳ ವೆಚ್ಚದಲ್ಲಿ ಕಾವೇರಿ 4ನೇ ಹಂತದ 2ನೇ ಘಟಕದ ಯೋಜನೆಗೆ ಚಾಲನೆ.
- ವಿದ್ಯುತ್ : ರಾಜೀವ್‌ಗಾಂಧಿ ಗ್ರಾಮೀಣ ವಿದ್ಯುದ್ದೀಕರಣ ಯೋಜನೆಯಡಿ ರೂ. 1026 ಕೋಟಿ ವೆಚ್ಚದಲ್ಲಿ 19 ಲಕ್ಷ ಗ್ರಾಮೀಣ ಕುಟುಂಬಗಳಿಗೆ ವಿದ್ಯುತ್ ಸೌಕರ್ಯ, ಬಡತನ ರೇಖೆಗಿಂತ ಕೆಳಗಿರುವ ಎಲ್ಲಾ ಗ್ರಾಮೀಣ ಕುಟುಂಬಗಳಿಗೆ ಉಚಿತ ವಿದ್ಯುತ್ ಸಂಪರ್ಕ ನೀಡಲು ನಿರ್ಧಾರ.
- ಕೈಗಾರಿಕೆ : ರೂ. 23,000 ಕೋಟಿಗಳ ಬಂಡವಾಳ ಹೂಡಿಕೆಯ ಒಎನ್‌ಜಿಸಿ ಯೋಜನೆಗೆ ಪ್ರಧಾನಿ ಅನುಮೋದನೆ. ಕೈಗಾರಿಕೆ ವಲಯದಲ್ಲಿ ರೂ. 45,600 ಕೋಟಿ ಮೌಲ್ಯದ ಬಂಡವಾಳ ಹೂಡಿಕೆಗೆ ರಾಜ್ಯ ಸರ್ಕಾರದ ಅನುಮೋದನೆ.
- ಹೈಕೋರ್ಟ್ ಪೀಠ : ಧಾರವಾಡ ಮತ್ತು ಗುಲ್ಬರ್ಗಾ ನಗರಗಳಲ್ಲಿ ಹೈಕೋರ್ಟ್ ಸಂಚಾರಿ ಪೀಠಗಳಿಗಾಗಿ ಬಹುದಿನಗಳಿಂದ ಕಾಣುತ್ತಿದ್ದ ಕನಸು ನನಸಾಗುತ್ತಲಿದೆ.
- ಸುವರ್ಣ ಕರ್ನಾಟಕ : "ಸುವರ್ಣ ಕರ್ನಾಟಕ". "ಬೃಹತ್ ಕರ್ನಾಟಕ" ಮತ್ತು "ಕರ್ನಾಟಕ ಗೆಜಿಟೆಯರ್" "ಸುವರ್ಣ ಪಥ" ಎಂಬ ಮೂರು ಸಂಪುಟಗಳನ್ನು ಸುವರ್ಣ ಕರ್ನಾಟಕದ ವರ್ಷಾಚರಣೆಯ ಸಂದರ್ಭದಲ್ಲಿ ಬಿಡುಗಡೆ ಮಾಡಲಾಗುವುದು.



ಕರ್ನಾಟಕ ವಾರ್ತೆ.

# ಬೀಡಿ ಉದ್ಯಮ ಮತ್ತು ಮಹಿಳೆಯರ ಆರೋಗ್ಯ

- ಎಸ್. ಎಂ. ಮಂಗಳಾ

ಪ್ರತಿನಿತ್ಯ ಕುಟುಂಬದ ನಿರ್ವಹಣೆಗಾಗಿ ಮಹಿಳೆಯರು ಹಲವಾರು ರೀತಿಯ ಉದ್ಯೋಗಗಳನ್ನು ಅವಲಂಬಿಸಿ ದುಡಿಯುತ್ತಿರುವುದು, ದುಡಿಮೆಯಿಂದ ಬಂದ ಸಂಪಾದನೆಯನ್ನು ಸಂಪೂರ್ಣ ಕೌಟುಂಬಿಕ ವ್ಯವಹಾರಗಳಿಗೇ ಸಂಪೂರ್ಣ ಬಳಸುವುದು, ತಮ್ಮ ಆರೋಗ್ಯದ ಬಗ್ಗೆ ಕಾಳಜಿ ತೋರಿಸದೆಯೇ ಎಷ್ಟೋ ಮಹಿಳೆಯರು ತಮ್ಮ ಇಡೀ ಜೀವನದ ಕಾಲಾವಧಿಯನ್ನು ಕುಟುಂಬದ ಅಭಿವೃದ್ಧಿಗಾಗಿಯೇ ವ್ಯಯಿಸುತ್ತಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಅಂತಹ ದುಡಿಮೆಗಳಲ್ಲಿ ಒಂದಾದ ''ಬೀಡಿ ಉದ್ಯಮ'' ಹೊಗೆ ಸೊಪ್ಪು ಆಧಾರಿತ ಉದ್ಯೋಗವಾಗಿದ್ದು, ಇದು ಮಹಿಳೆಯರ ಹಾಗೂ ಪ್ರಾಪ್ತ ವಯಸ್ಸಿನ ಹಾಗೂ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳು ಹೆಚ್ಚಾಗಿ ನಿರತರಾಗಿರುವುದು ಈ ಉದ್ಯೋಗದ ವೈಶಿಷ್ಟ್ಯವಾಗಿದೆ.

ಈ ಉದ್ಯೋಗವು ಮಹಿಳೆಯರ ಆರ್ಥಿಕ ಸ್ವಾವಲಂಬನೆಗೆ ಎಷ್ಟು ಅವಶ್ಯಕವಾಗಿದೆ. ಎರಡನೆಯದಾಗಿ ಆರ್ಥಿಕ ಸ್ವಾವಲಂಬನೆಯನ್ನು ಹೆಚ್ಚಿಸುವ ಮೂಲಕ ಮಹಿಳೆಯರ ಆರೋಗ್ಯದ ಮೇಲೆ ಯಾವ ರೀತಿಯ ಪರಿಣಾಮಗಳುಂಟಾಗಿವೆ, ಮೂರನೆಯದಾಗಿ ವಿದ್ಯಾವಂತ ಮಹಿಳೆಯರಿಗೆ ಉದ್ಯೋಗದ ಪರ್ಯಾಯ (Alternative) ವ್ಯವಸ್ಥೆಯ ಬಗ್ಗೆ ತಿಳಿಯುವುದೇ ಆಗಿದೆ. ಈ ಮೇಲಿನ ಉದ್ದೇಶಗಳನ್ನಿಟ್ಟುಕೊಂಡು ಸುಮಾರು 200 ಮಂದಿ ಮಹಿಳೆಯರನ್ನು ಅಧ್ಯಯನ ಮಾಡಲಾಯಿತು (Interview) ಶೇ. 50ರಷ್ಟು ಅಕ್ಷರಸ್ಥ ಮಹಿಳೆಯರು ಈ ಉದ್ಯೋಗದಲ್ಲಿ ನೆಲೆಸಿದ್ದಾರೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗೆ ಹೋದವರು ಹೆಚ್ಚಿನ ಮಂದಿ. ಶೇ. 25ರಷ್ಟು ಪ್ರೌಢಶಿಕ್ಷಣ ಪಡೆದವರಾಗಿದ್ದಾರೆ. ಅವರಲ್ಲಿ ಶೇ. 64ರಷ್ಟು ಬಡತನ ರೇಖೆಗಿಂತಲೂ ಕೆಳಗಿನ ಆದಾಯವನ್ನು ಉಳ್ಳವರು ಎಂಬುದಾಗಿ ತಿಳಿಯುತ್ತದೆ. ಈ ಉದ್ಯೋಗಕ್ಕೆ ಅಕ್ಷರ ಜ್ಞಾನದ ಅವಶ್ಯಕತೆಯಿಲ್ಲದಿದ್ದರೂ ಕೌಶಲ್ಯದ ಅವಶ್ಯಕತೆ ಅತ್ಯಂತ ಮುಖ್ಯವಾಗಿರುವುದು ಕಂಡುಬರುತ್ತದೆ. ಈ ಉದ್ಯೋಗ ಹಾಗೂ ಅಕ್ಷರ ಜ್ಞಾನದ ಮಧ್ಯೆ ಹೊಂದಾಣಿಕೆಯಿದ್ದಾಗ್ಯೂ ಅಂತಹ ಕುಟುಂಬಗಳಲ್ಲಿ ಮಹಿಳೆಯರ ಆರೋಗ್ಯದ ಬಗೆಗಿನ ವಿಚಾರಗಳು ಹಾಗೂ ಕಾಳಜಿಯ ಬಗ್ಗೆ ಗಮನಿಸಿದಾಗ ಬಂದಂತಹ ಮಾಹಿತಿಯ ಆಧಾರದ ಮೇಲೆ ಅಲ್ಲಿನ ಮಹಿಳೆಯರ ಆರ್ಥಿಕ ಸ್ವಾವಲಂಬನೆ, ಸಾಕ್ಷರತೆ, ಆರೋಗ್ಯ ಇವು ಮೂರು ವಿಷಯಗಳು ಮಹಿಳೆಯರ ಸ್ಥಾನಮಾನದ ಮೇಲೆ ಪ್ರಭಾವ ಬೀರುವ ಅಂಶಗಳಾಗಿರುವ ಬಗ್ಗೆ ಒಂದು ಮುಖ್ಯವಾದ ಮಾಹಿತಿ ಈ ಮೂಲಕ ತಿಳಿದುಬರುತ್ತದೆ.

ಈ ಅಧ್ಯಯನದ ಪ್ರಮುಖ ಜಿಲ್ಲೆಯಾದ ದಕ್ಷಣ ಕನ್ನಡವು ಕರ್ನಾಟಕ ರಾಜ್ಯದಲ್ಲಿ ಪ್ರಸಿದ್ಧವಾಗಿದೆ. ಇದು ರಾಜ್ಯದಲ್ಲೇ ಹೆಚ್ಚಿನ ಸಾಕ್ಷರತೆಯನ್ನು ಗಳಿಸಿದ್ದು, ಹಾಗೂ ಮಹಿಳೆಯರ ಲಿಂಗ ಪ್ರಮಾಣವು ಇತರೆ ಜಿಲ್ಲೆಗಳಿಗಿಂತ ಉನ್ನತ ಸ್ಥಾನದಲ್ಲಿದೆ. ಇದು ರಾಜ್ಯದ (ಕರ್ನಾಟಕ) ದಕ್ಷಿಣ ಭಾಗದಲ್ಲಿದ್ದು ಸಮುದ್ರ ತೀರ ಪ್ರದೇಶವಾಗಿದ್ದು ಮೀನುಗಾರಿಕೆಗೂ ಹೆಚ್ಚು ಹೆಸರಾಗಿದೆ. ಈ ಜಿಲ್ಲೆಯಲ್ಲಿನ ಹೆಚ್ಚಿನ ಮಹಿಳೆಯರ ಪ್ರಮುಖ ಉದ್ಯೋಗವೆಂದರೆ ಬೀಡಿ ತಯಾರಿಕೆ. ಇಡೀ ಜಿಲ್ಲೆಯಲ್ಲಿ 3 ಲಕ್ಷಕ್ಕಿಂತಲೂ ಹೆಚ್ಚಿನ ಮಹಿಳೆಯರು ಈ ದುಡಿಮೆಯಿಂದ ಜೀವನ ನಿರ್ವಹಿಸುತ್ತಾರೆ. ಈ ಉದ್ಯಮಕ್ಕೆ 20-25 ವರ್ಷಗಳ ಇತಿಹಾಸವಿದೆ.

ಸಾಮಾನ್ಯವಾಗಿ ಈ ಬೀಡಿ ತಯಾರಿಕೆಯು ಸುಮಾರು ಹಂತಗಳಲ್ಲಿ ನಡೆಯುತ್ತದೆ. ಎಲೆಕತ್ತರಿಸುವುದರಿಂದ ಹಿಡಿದು, ದಾರಹಾಕುವುದು ಬೀಡಿಗಳ ಅಂಚುಮಡಿಚುವುದು, ನಂತರ ಮತ್ತೆ ಎಣಿಸಿ ಮತ್ತೊಂದು ಕಟ್ಟುಗಳನ್ನಾಗಿ (25 ಬೀಡಿಗಳ ಒಂದು ಕಟ್ಟು) ಮಾಡುವುದು. ಹೀಗೆ ಪ್ರತಿ ಕುಟುಂಬಗಳಲ್ಲೂ ಕೆಲಸವನ್ನೂ ಹಂತ ಹಂತವಾಗಿ ಹಂಚಿಕೊಂಡು ಬೀಡಿ ತಯಾರಿಸುತ್ತಾರೆ. ತಯಾರಾದ ಬೀಡಿಗಳನ್ನು ಆಯಾ ಗ್ರಾಮಗಳಲ್ಲಿ ಬರುವಂತಹ ಕಂಟ್ರಾಕ್ಟರ್ ಅಥವಾ ಏಜೆಂಟುಗಳ ಅಂಗಡಿಗಳಿಗೆ ಕೊಂಡೊಯ್ದು, ಅವರಿಗೆ ವಾಪಸ್ಸು ಮಾಡಿ, ಪುನಃ ಬೀಡಿ ತಯಾರಿಸಲು ಬೇಕಾಗುವ ಕಚ್ಚಾ ವಸ್ತುಗಳನ್ನು ಪಡೆದುಕೊಂಡು, ತಯಾರಿಸಿದ ಬೀಡಿಗಳ ಹಣವನ್ನು ತೆಗೆದುಕೊಂಡು, ಮನೆಗೆ ಬರುತ್ತಾರೆ. ಈ ಕೆಲಸವು ಪ್ರಮುಖವಾಗಿ ಮಹಿಳೆಯರಿಂದಲೇ ನಡೆಯುತ್ತದೆ. ಅದರಲ್ಲೂ ಪ್ರಮುಖವಾಗಿ ಯುವತಿಯರ ಪಾತ್ರ ಅತ್ಯಂತ ಹೆಚ್ಚು ಎಂದೇ ಹೇಳಬೇಕಾಗುತ್ತದೆ.

ಪ್ರತಿಯೊಂದು ಕುಟುಂಬದಲ್ಲೂ ಹೆಣ್ಣು ಮಕ್ಕಳು ಪ್ರಾಪ್ತವಯಸ್ಕರು (Adults) ಶಾಲೆ ಬಿಟ್ಟ ನಂತರ ಮದುವೆಯಾಗಿ ಗಂಡನ ಮನೆಗೆ ಹೋಗುವ ಮುನ್ನ ಈ ದುಡಿಮೆಯಿಂದ ಸಾವಿರಗಟ್ಟಲೆ ಹಣ ಸಂಪಾದಿಸಿ ತಮ್ಮ ಕುಟುಂಬದ ನಿರ್ವಹಣೆಗೆ ತಮ್ಮ ಆದಾಯವನ್ನು ಸಹ ಸರಿದೂಗಿಸುತ್ತಾರೆ. ಜೊತೆಗೆ ಅವರಿಗೆ ಬೇಕಾದ ಒಡವೆ, ಬಟ್ಟೆ

ಮನೆಗೆ ಬೇಕಾದ ಸಾಮಾನುಗಳನ್ನು ಕೊಳ್ಳುತ್ತಾರೆ. ತಾಯಂದಿರು ಸಂಪಾದಿಸಿದ ಹಣವನ್ನು ಸಂಪೂರ್ಣ ಕುಟುಂಬದ ವ್ಯವಹಾರಕ್ಕೆ ಉಪಯೋಗಿಸುತ್ತಾರೆ. ವರದಕ್ಷಿಣೆಕೊಟ್ಟು ಮದುವೆಯಾಗುವ ಸಂಬಂಧಗಳೇ ಹೆಚ್ಚಿರುವುದರಿಂದ ಎಷ್ಟೋ ಹೆಣ್ಣು ಮಕ್ಕಳು ತಮ್ಮ ಮದುವೆಗೂ ಹಣ ಕೂಡಿಟ್ಟವರನ್ನು ಕಾಣಬಹುದು.

ಈ ಜಿಲ್ಲೆಯಲ್ಲಿ ತಯಾರಾದ ಬೀಡಿಗಳು ಸುಮಾರು (25-30) ವಿಧದ ಬೀಡಿಗಳಿದ್ದು, ಇವು ದೇಶದ ನಾನಾ ಭಾಗಗಳಿಗೆ ಕೊಂಡೊಯ್ಯಲ್ಪಡುತ್ತವೆ. ಹಾಗೂ ಇತರ ರಾಜ್ಯಗಳಿಂದ ಈ ಉದ್ಯಮಕ್ಕೆ ಬೇಕಾದ ಕಚ್ಚಾ ವಸ್ತುಗಳನ್ನು ಕೂಡ ಹೊರ ರಾಜ್ಯಗಳಿಗೆ ತರಿಸಿಕೊಳ್ಳುತ್ತಿದೆ. ಇದರಲ್ಲಿ ಮುಖ್ಯ ಪಾತ್ರವಹಿಸುವವರು ಕಾರ್ಖಾನೆಯ ಮಾಲೀಕರು, ಕಂಟ್ರಾಕ್ಟದಾರರು, ಏಜೆಂಟರುಗಳು. ಈ ಮೂರೂ ಹಂತಗಳಲ್ಲಿ ಕಚ್ಚಾ ವಸ್ತುಗಳ ಸರಬರಾಜು ಹಾಗೂ ಉತ್ಪಾದನಾ ವಸ್ತುವನ್ನು ಸಂಗ್ರಹಿಸಿ, ಕಾರ್ಖಾನೆಗಳಿಗೆ ತಲುಪಿಸುವ ಕಾರ್ಯ ಈ ಕಂಟ್ರಾಕ್ಟರ್ ಹಾಗೂ ಏಜೆಂಟರುಗಳ ಮೂಲಕವಾಗಿಯೇ ನಡೆಸಲ್ಪಡುತ್ತದೆ. ಇಡೀ ಜಿಲ್ಲೆಯಲ್ಲಿ ಸಾವಿರಾರು ಮಂದಿ ಕಂಟ್ರಾಕ್ಟರ್ ಹಾಗೂ ಏಜೆಂಟರುಗಳು ಕೆಲಸ ನಿರ್ವಹಿಸುವದು ಕಂಡು ಬರುತ್ತದೆ.

ಈ ಬೀಡಿ ಉದ್ಯಮವು ವರ್ಷದ ಎಲ್ಲಾ ಕಾಲದಲ್ಲೂ ಮಾಡುವಂತಹದು ಹಾಗೂ ಹೊರಗೆ ಹೋಗದೆ ಮನೆಯಲ್ಲೆ ಕುಳಿತು ಮಾಡುವುದರಿಂದ ಪ್ರತಿಯೊಂದು ಬಡ ಕುಟುಂಬವು ಬಡವ ಶ್ರೀಮಂತರೆನ್ನದೆ ಈ ಉದ್ಯೋಗದಲ್ಲಿ ತೊಡಗಿದ್ದಾರೆ. ಅಲ್ಲದೆ ಎಲ್ಲಾ ಜಾತಿ ವರ್ಗದ ಮಹಿಳೆಯರಿಗೂ ಉದ್ಯೋಗ ಒದಗಿಸಿ ಕೊಟ್ಟಿದೆ. ಅವರ ಆರ್ಥಿಕ ಸ್ವಾವಲಂಬನೆಗೆ ಮಾದರಿಯಾಗಿದೆ. ಪ್ರತಿಯೊಬ್ಬ ಹೆಣ್ಣು ಮಗಳು ಮನೆಯಲ್ಲಿ (ಮನೆ ಕೆಲಸದ ಜೊತೆಗೆ, ಅಡಿಗೆ ಮಾಡುವುದು, ಮಕ್ಕಳನ್ನು ಶಾಲೆಗೆ ಕಳುಹಿಸಿ, ನೀರು ಸಂಗ್ರಹ, ಮುಂತಾದವು) ಕೆಲಸಗಳ ಜೊತೆಗೆ ಉಳಿದ ಬಿಡುವಿನ ವೇಳೆಯನ್ನು ಬೀಡಿ ತಯಾರಿಸಲು ಉಪಯೋಗಿಸುತ್ತಾರೆ. ಸುಮಾರು ದಿನಕ್ಕೆ 10-15 ಗಂಟೆಗಳ ಕಾಲ ಕೆಲಸ. ಇಡೀ ದಿನ ಈ ದುಡಿಮೆಗೆ ಇವರ ಶ್ರಮ ವಿನಿಯೋಗವಾಗುತ್ತದೆ. ಎಷ್ಟೋ ಕುಟುಂಬದಲ್ಲಿನ ಮಹಿಳೆಯರ ಜೀವನವು ಈ ಆದಾಯದಿಂದಲೇ ನಿರ್ವಹಿಸಲ್ಪಡುತ್ತಿದೆ. ಕೆಲವು ಕುಟುಂಬಗಳಲ್ಲಿ ಪುರುಷರು. ಹೊರ ದೇಶಗಳಲ್ಲಿ ಉದ್ಯೋಗ ಆರಿಸಿ ಹೋದವರು ವಾಪಸ್ಸು ಬರುವುದು 4-5 ವರ್ಷಗಳಿಗೆ ಒಂದು ಬಾರಿ. ಆ ಸಮಯದಲ್ಲಿ ಇಡೀ ಕುಟುಂಬದ ನಿರ್ವಹಣೆ, ಜವಾಬ್ದಾರಿ ಇವೆಲ್ಲವೂ ಮಹಿಳೆಯರ ಮೇಲೆಯೇ ಅವಲಂಬಿಸಿರುವುದನ್ನು ನಾವು ಇಲ್ಲಿ ಕಾಣಬಹುದಾಗಿದೆ. ಬಾಂಬೆ, ದುಬಾಯಿ, ಸಿಂಗಪೂರ, ಇಂತಹ ಹಲವಾರು ದೇಶಗಳಲ್ಲಿ ಪುರುಷರು ಹೋಟೆಲ್‌ಗಳಲ್ಲಿ, ವ್ಯಾಪಾರ, ಗ್ಯಾರೇಜ್ ಇತರೆ ಯಾವುದೇ ದುಡಿಮೆಯಿಂದ ಬಂದ ಸಂಪಾದನೆಯನ್ನು 6 ತಿಂಗಳಿಗೋ, ವರ್ಷಕ್ಕೆ ಒಂದು ಅಥವಾ ಎರಡು ಭಾರಿ ಹಣ ಕಳುಹಿಸುವುದು ಕಂಡುಬರುತ್ತದೆ. ಅಂತಹ ಸಂದರ್ಭಗಳಲ್ಲಿ ಇಲ್ಲಿನ ಮಹಿಳೆಯರ ಈ ಉದ್ಯೋಗ ಅವರ ಆರ್ಥಿಕ ಸ್ವಾವಲಂಬನೆಯ ಜೊತೆಗೆ, ಕೌಟುಂಬಿಕ ಹೊಣೆಗಾರಿಕೆ, ಆ ಮೂಲಕ ಕುಟುಂಬದಲ್ಲಿ ಈಕೆಯೇ ಹೆಚ್ಚಿನ ಅಧಿಕಾರ, ಜವಾಬ್ದಾರಿಗಳನ್ನು ನಿರ್ವಹಿಸುವ ಹೊಣೆ ಮಹಿಳೆಯರ ಮೇಲೆ ಬಿದ್ದಿದೆ.

ಭೌಗೋಳಿಕ ಕಾರಣಗಳಿಂದಾಗಿ, ಮಹಿಳೆಯರು ಬೇರೆ ವಿಧದ ದುಡಿಮೆಯ ಪರ್ಯಾಯ ವ್ಯವಸ್ಥೆಯಿಲ್ಲದ ಸಂದರ್ಭದಲ್ಲಿ ಮಹಿಳೆಯರು ಅನಿವಾರ್ಯವಾಗಿ ಈ ದುಡಿಮೆಯನ್ನೆ ಅವಲಂಬಿಸಬೇಕಾಗಿದೆ. ವ್ಯವಸಾಯ ಕ್ಷೇತ್ರದಲ್ಲಿ ಕೆಲಸದ ಅವದಿ ವರ್ಷದ ಕೆಲವೇ ತಿಂಗಳಲ್ಲಿ ಮಾತ್ರ ದುಡಿಮೆ ಸಿಗುವುದರಿಂದ ಇತರ ಬಿಡುವಿನ ಕಾಲದಲ್ಲಿ ಮಹಿಳೆಯರು ಉದ್ಯೋಗಕ್ಕೆ ಅರಸಬೇಕಾಗುತ್ತದೆ. ಅಲ್ಲದೆ, ಎಲ್ಲರಿಗು ವ್ಯವಸಾಯ ಕ್ಷೇತ್ರ ಉದ್ಯೋಗವನ್ನು ಒದಗಿಸಲಾರದು ಕೂಡ. ಏಕೆಂದರೆ ಹೆಚ್ಚಿನ ವ್ಯವಸಾಯೋತ್ಪನ್ನಗಳೆಲ್ಲವೂ ಕೂಡ ತೋಟದ ಬೆಳೆಯಾದ್ದರಿಂದ ಉದಾ : ತೆಂಗು, ಅಡಿಕೆ, ಬಾಳೆ, ಹೀಗೆ ಕೆಲವೇ ದಿನಗಳು ಮಾತ್ರ ಇಂತಹ ತೋಟಗಳಲ್ಲಿ ಕೆಲಸವಿರುತ್ತದೆ. ಈ ಕಾರಣದಿಂದಾಗಿ ಇಡೀ ವರ್ಷ ಮಹಿಳೆಯರು ನಿರುದ್ಯೋಗಿಗಳಾಗುವ ಸಂದರ್ಭ ಹೆಚ್ಚಿರುವುದರಿಂದ ಈ ಬೀಡಿ ಉದ್ಯಮ ಅತ್ಯಂತ ಹೆಚ್ಚು ಪ್ರಾಶಸ್ತ್ಯವನ್ನು ಪಡೆದು ಇಂದು ಈ ಜಿಲ್ಲೆಯು ಬೀಡಿ ಉದ್ಯಮಕ್ಕೆ ಪ್ರಸಿದ್ಧಿಯಾಗಿದೆ.

ಈ ಉದ್ಯಮವು ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ಒದಗಿಸುವುದಾದರೂ ಅವರ ಆರೋಗ್ಯದ ಮೇಲೂ ಅಷ್ಟೇ ದುಷ್ಪರಿಣಾಮಗಳನ್ನು ಬೀರಿರುವುದರಲ್ಲಿ ಸಂಶಯವಿಲ್ಲ. ಅತ್ಯಂತ ಹೆಚ್ಚಿನ ಹದಿಹರೆಯದ ಹೆಣ್ಣು ಮಕ್ಕಳು ಈ ದುಡಿಮೆಯಲ್ಲಿ ನಿರತರಾಗಿರುವುದರಿಂದ ಅವರ ಆರೋಗ್ಯದ ಜೊತೆಗೆ ಅವರು ಆಯಸ್ಸನ್ನು ಕೂಡ ಕಡಿಮೆ ಮಾಡಿಕೊಳ್ಳುವುದು ಕೆಲವೊಂದು ವಿಚಾರಗಳಿಂದ ತಿಳಿದುಬರುತ್ತದೆ. ಈ ದುಡಿಮೆಗೆ ಮುಖ್ಯ ಕಾರಣ "ಕುಟುಂಬದಲ್ಲಿನ ಬಡತನ"ದಿಂದಾಗಿ ಎಂದು ತಿಳಿಯುತ್ತದೆ. ಇಂತಹ ಹಲವಾರು ಹೆಣ್ಣು ಮಕ್ಕಳನ್ನು ಖುದ್ದಾಗಿ ಮಾತನಾಡಿಸಿದಾಗ, ಆರೋಗ್ಯದ ಬಗ್ಗೆ ಮಾಹಿತಿ ಸಂಗ್ರಹಿಸುವಾಗ ಬಂದಂತಹ ಉತ್ತರಗಳು ಅವರ ಆರೋಗ್ಯದ ಮೇಲೆ ಯಾವ ರೀತಿಯ ಪರಿಣಾಮ ಬೀರಿವೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಒಂದೇ ಕಡೆ ಕೂತು ಕೆಲಸ ಮಾಡುವುದರಿಂದ, ಒಂದೇ ಕಡೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸುವುದರಿಂದ ಹಲವಾರು ತೊಂದರೆಗಳಿಗೆ ಬಲಿಯಾಗುತ್ತಿದ್ದಾರೆ. ತಲೆನೋವು (ಸತತವಾಗಿ ಬರುವಂತದ್ದು) ತಲೆತಿರುಗು, ಜ್ವರ ಮೈಕೈ ನೋವು, ಕೀಲುಗಳ ನೋವು, ಆಸ್ತಮಾ ರೋಗ, ಕ್ಷಯ, ಚರ್ಮದ ಮೇಲಿನ ಬಣ್ಣದ ಬದಲಾವಣೆ, ಜಾಂಡೀಸ್, ಖಾಯಿಲೆಗಳು ಮಹಿಳೆಯರನ್ನು ನಿಧಾನವಾಗಿ ಬಲಿ ತೆಗೆದುಕೊಳ್ಳುವುದರ ಜತೆಗೆ ಸಂತಾನೋತ್ಪತ್ತಿ ಆರೋಗ್ಯದ ಮೇಲೆ ಇನ್ನೂ ಹೆಚ್ಚಿನ ದುಷ್ಪರಿಣಾಮ ಉಂಟಾಗುತ್ತಿರುವುದು ತಿಳಿದುಬರುತ್ತದೆ. ನಿಧಾನವಾಗಿ ಈ ಆರೋಗ್ಯದ ದುಷ್ಪರಿಣಾಮಗಳು ಪ್ರಾಣಕ್ಕೂ ಅಪಾಯ ಒದಗಿಸಿ, ಆಸ್ಪತ್ರೆ ಸೇರುವ ಮಹಿಳೆಯರನ್ನು ನಾವು ಕಾಣಬಹುದಾಗಿದೆ.

ಹೀಗಿದ್ದರೂ ಸಹ ಎಷ್ಟೋ ಮಹಿಳೆಯರು ಹೆಣ್ಣು ಮಕ್ಕಳು ಆಸ್ಪತ್ರೆಗಳಿಗಾಗಲೀ, ಡಾಕ್ಟರರ ಹತ್ತಿರವಾಗಲೀ ಹೋಗಿ ತೋರಿಸಿ ಕೊಳ್ಳುವಲ್ಲಿ ಹಿಂಜರಿಯುತ್ತಾರೆ. ಕೆಲವು ಖಾಯಿಲೆಗಳ ಬಗ್ಗೆ ಅರಿವೇ ಇಲ್ಲದಿರುವ ಮಹಿಳೆಯರು ತಮ್ಮ ಆರೋಗ್ಯದ ಬಗ್ಗೆಯೇ ಅಲಕ್ಷಿಸುತ್ತಾರೆ. ಆಸ್ಪತ್ರೆ ಸೇರಿದರೆ ಖರ್ಚಿಗೆ ಹೆಚ್ಚು ಹಣ ಎಲ್ಲಿಂದ ತರುವುದು ಎಂಬುದು ಕೆಲವೊಬ್ಬರ ಉತ್ತರವಾದರೆ, ಖಾಯಿಲೆ ಬಂದು ದುಡಿಮೆ ಬಿಟ್ಟರೆ ನಮ್ಮ ಜೀವನದಲ್ಲಿ ಕಷ್ಟವಾಗುತ್ತದೆ ಎಂಬುದು ಕೆಲವು ಮಹಿಳೆಯರ ಅಭಿಪ್ರಾಯವಾಗಿರುತ್ತದೆ. ಇಂತಹ ಎಷ್ಟೋ ಬಡ ಮಹಿಳೆಯರನ್ನು ನಾವು ಅಲ್ಲಿ ಕಾಣಬಹುದಾಗಿದೆ. ಮತ್ತೊಂದು ಕಾರಣವೆಂದರೆ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಎಷ್ಟೋ ಅಂತರವಿರುವ ಕಡೆಗಳಲ್ಲಿ ಆಸ್ಪತ್ರೆಗಳ ಕೊರತೆಯು ಮತ್ತೊಂದು ಕಾರಣವಾಗಿರುತ್ತದೆ. ಆಗ ಎಷ್ಟೋ ದೂರ ನಡೆದು ಹೋಗಬೇಕಾದ ಪ್ರಸಂಗ ಬೇರೆಯಿರುವುದರಿಂದ ಅವರು ಆರೋಗ್ಯದ ಬಗ್ಗೆ ಅಷ್ಟೇನೂ ಕಾಳಜಿ ವಹಿಸಿದಂತೆ ಕಾಣುವುದಿಲ್ಲ.

ಇಂತಹ ಸಂದರ್ಭದಲ್ಲಿ ದುಡಿಮೆಗಾರರ ಒಳಿತಿಗಾಗಿ, ಅವರ ಆರೋಗ್ಯ ಸುಧಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಸರ್ಕಾರ ಅಥವಾ ಖಾಸಗಿ ಉದ್ದಿಮೆಯ ಮಾಲೀಕರು ಕೈಗೊಳ್ಳಬೇಕಾಗುತ್ತದೆ. ಕೆಲವೊಂದು ಸುಧಾರಣ ಕಾರ್ಯಕ್ರಮಗಳನ್ನು ಹೇಳುವುದಾದರೆ-

1. ಆಸ್ಪತ್ರೆಗಳು ಆದಷ್ಟು ಬಡ ಜನರಿಗೆ ತಮ್ಮ ಸೇವೆಗಳನ್ನು ಮೀಸಲಿಡಬೇಕು.
2. ಆಗಾಗ್ಗೆ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಿ (ಗ್ರಾಮಗಳಲ್ಲಿ) ಆರೋಗ್ಯದ ಬಗ್ಗೆ ಮಹಿಳೆಯರಿಗೆ ತಿಳುವಳಿಕೆ ನೀಡುವುದು.
3. ಇದುವರೆಗೂ ಬೀಡಿ ಉದ್ಯಮದಲ್ಲಿ ದುಡಿಯುವ ಮಹಿಳೆಯರಿಗೆ ಆಸ್ಪತ್ರೆಗಳಲ್ಲಿ ಮೀಸಲಾತಿ ಇರುವುದಾದರು, ಅದನ್ನು ಅವರು ಸರಿಯಾಗಿ ಉಪಯೋಗಿಸಿಕೊಳ್ಳಲು, ಈ ಉದ್ಯಮದ ಮಾಲೀಕರು ಅವರಿಗೆ ತಿಳುವಳಿಕೆ ನೀಡಬೇಕು.
4. ಕ್ಷಯರೋಗ, ಕ್ಯಾನ್ಸರ್ ಈ ತರಹದ ಮಾರಕ ರೋಗಗಳ ಬಗ್ಗೆ ಮಹಿಳೆಯರು ತುಂಬಾ ಕಾಳಜಿ ವಹಿಸುವಂತೆ ಎಚ್ಚರಿಕೆ ನೀಡಬೇಕು ಹಾಗೂ ಅವರು ಭವಿಷ್ಯದಲ್ಲಿ ನಿರ್ವಹಿಸಬೇಕಾದ ತಾಯ್ತನದ ಪ್ರಾಮುಖ್ಯತೆ, ಮುಂದೆ ಹುಟ್ಟುವ ಮಕ್ಕಳಿಗೆ ಈ ರೋಗಗಳು ಬಾರದಂತೆ ನೋಡಿಕೊಳ್ಳಲು ಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಲ್ಲಿ ಮುನ್ನೆಚ್ಚರಿಕೆ ನೀಡಬೇಕು. ಆದಷ್ಟು ಇಂತಹ ಪ್ರದೇಶಗಳಲ್ಲಿ ಮಹಿಳಾ ಡಾಕ್ಟರರನ್ನು ನೇಮಿಸಿ ಆ ಗ್ರಾಮಗಳಲ್ಲಿ ಕಾರ್ಯನಿರ್ವಹಿಸುವಂತೆ ಸಲಹೆ ನೀಡಬೇಕು.
5. ಆದಷ್ಟು ಈ ಕೆಲಸ ಮಾಡುವ ಸಂದರ್ಭದಲ್ಲಿ ಗಾಳಿ, ಬೆಳಕು ಚೆನ್ನಾಗಿರುವ ಜಾಗದಲ್ಲಿ ಕೂತು ಕೆಲಸ ನಿರ್ವಹಿಸಿದರೆ ಸ್ವಲ್ಪ ಮಟ್ಟಿಗಾದರು ಆರೋಗ್ಯದ ಮೇಲೆ ಆಗುವ ದುಷ್ಪರಿಣಾಮಗಳನ್ನು ತಡೆಗಟ್ಟಬಹುದು.

ಒಟ್ಟಾರೆ, ಬೀಡಿ ಉದ್ಯಮವು ಒಂದು ರೀತಿಯಲ್ಲಿ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ನೀಡುವಂತಹ ಉದ್ಯೋಗವಾಗಿದ್ದು, ವರ್ಷದ ಎಲ್ಲಾ ಕಾಲದಲ್ಲೂ ಇರುವ ಜಾಗದಲ್ಲೇ ಸಂಪಾದಿಸಿ ಜೀವನ ನಡೆಸಬಹುದಾದರೂ, ಇದು ಮಹಿಳೆಯರ ಆರೋಗ್ಯದ ಮೇಲೆ ಹೆಚ್ಚಿನ ಪರಿಣಾಮ ಬೀರುವುದರಿಂದ, ಅವರು ಅನೇಕ ಹಾನಿಕಾರಕ ರೋಗಗಳಿಗೆ ಬಲಿಯಾಗುತ್ತಾರೆ. ಇಂತಹ ರೋಗಗಳು ಒಮ್ಮೆ ಬಂದ ನಂತರದ ತಲೆಮಾರಿನಿಂದ ಮತ್ತೊಂದು ತಲೆಮಾರಿಗೂ ಬಹಳ ಸುಲಭವಾಗಿ ವರ್ಗಾಯಿಸಲ್ಪಡುತ್ತದೆ. ಆದಷ್ಟು ಈ ತೊಂದರೆಗಳು ದುಷ್ಪರಿಣಾಮಗಳನ್ನು ತಡೆಗಟ್ಟುವ ಮೂಲಕ ಮಹಿಳೆಯರ ಸಾವಿನ ಪ್ರಮಾಣವನ್ನು ಕಡಿಮೆಗೊಳಿಸಿದ್ದೇ ಆದರೆ ಯಾವುದೇ ಒಂದು ಉದ್ಯೋಗವು ಮಹಿಳೆಯರ ಸವತೋಮುಖ ಅಭಿವೃದ್ಧಿಗೆ ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಲಕ್ಷಾಂತರ ಮಹಿಳೆಯರು ಈ ದುಡಿಮೆಯಲ್ಲಿ ಅವಲಂಬಿಸಿರುವ ಕಾರಣ ಸರ್ಕಾರವೂ ಕೂಡ ಇಂತಹ ಮಹಿಳಾ ದುಡಿಮೆಗಾರರ ಬಗ್ಗೆ ಕಾಳಜಿವಹಿಸಬೇಕಾಗುತ್ತದೆ. ಅವರಿಗೆ ಅನುಕೂಲಕರ ಪರಿಸರವನ್ನು ನಿರ್ಮಾಣ ಮಾಡಿಕೊಡಬೇಕಾಗುತ್ತದೆ. ☐☐

**ಕೃಪೆ: ಮಹಿಳಾ ಅಧ್ಯಯನ.**

# ಮೀಯುವ ಆಟ



'ನಾಕನೇ ನೀರು' (ಕಥಾ ಸಂಕಲನ) ಮತ್ತು 'ಗಾಂಧಿ ಬಂದ' (ಕಾದಂಬರಿ)ಯ ಮೂಲಕ ಈಗಾಗಲೇ ಕನ್ನಡ ಸಾಹಿತ್ಯ ಲೋಕಕ್ಕೆ ಚಿರಪರಿಚಿತರಾಗಿರುವ ಡಾ। ಎಚ್. ನಾಗವೇಣಿಯವರ ಇತ್ತೀಚಿನ ಕಥಾ ಸಂಕಲನ 'ಮೀಯುವ ಆಟ' ಕನ್ನಡ ಕಥಾ ಸಾಹಿತ್ಯಕ್ಕೆ ಮತ್ತೊಂದು ಉತ್ತಮ ಕೊಡುಗೆ.

ನಾಗವೇಣಿಯವರ ಕಥನ ಶೈಲಿಯೆಂದರೆ ಸೊಕ್ಕುವ ವಿವರಗಳಿಂದ ಸಮೃದ್ಧವಾದ ಅನುಭವ ಕಟ್ಟಿಕೊಡುವ ರೀತಿಯದು. ಈ ಕಥಾ ಸಂಕಲನವೂ ಅದಕ್ಕೆ ಹೊರತಾಗಿಲ್ಲ. ದಕ್ಷಿಣ ಕನ್ನಡದ ವಿಶಾಲ ಕಡಲಿನಲ್ಲಿ ಅಕ್ಷಯವಾಗದ ಅನುಭವದ ವಿವರಗಳನ್ನು ಕತೆಗಾರ್ತಿ ಮೊಗೆದು ಮೊಗೆದು ಕೊಡುತ್ತಾರೆ. 'ಮೀಯುವ ಆಟ'ದ ಕತೆಯಲ್ಲಿ ಬಾಣಂತಿಗೆ ಬಿಸಿ ನೀರು ಸಿದ್ದಗೊಳಿಸುವ ಕ್ರಿಯೆ ಸವಿವರವಾಗಿ ಕಣ್ಣ ಮುಂದೆ ಬಿಚ್ಚಿಕೊಳ್ಳುತ್ತದೆ. 'ಧಣಿಗಳ ಬೆಳ್ಳಿಲೋಟ'ವನ್ನು ಕೊಚ್ಚಿಕೊಂಡು ಹೋದ ಕಡಲು ಮನುಷ್ಯನ ಸಣ್ಣತನವನ್ನು ಬಟಾಬಯಲು ತೆರೆದಿರಡುತ್ತದೆ. 'ಸೇವಂತಿ ಓಲೆ'ಯ ಸೇವಂತಿ

> ಲೇಖಕಿ : ಎಚ್. ನಾಗವೇಣಿ
> ಪ್ರಕಾಶನ : ಲೋಹಿಯಾ, ಬಳ್ಳಾರಿ.
> ಪುಟ : 144, ಬೆಲೆ : ರೂ. 90/-
> ಪ್ರಕಟಣೆಯ ವರ್ಷ : 2005

ತನ್ನ ಸ್ವಾಭಿಮಾನಕ್ಕೆ ಆಘಾತವಾದಾಗ ತನ್ನ ತಿರಸ್ಕಾರವನ್ನು ಪ್ರಿಯಕರನಿಗೆ ತೋರಿಸುವುದು ಅವನಿತ್ತ ಓಲೆಯನ್ನು ಕಡಲಿಗೆ ಚೆಲ್ಲಿಯೇ 'ಕಡಲ ಒಡಲು' ಎಷ್ಟು ವಿಶಾಲವೋ ಅಷ್ಟೇ ವಿಶಾಲವಾದ ಪ್ರೀತಿ, ವಿಶ್ವಾಸ ತೋರಿಸುವ ಮಂಜು ಮರಕಾಲ್ತಿ ಸೈಯದ್ದಿ, ನಫೀಸಮ್ಮ ದಂಪತಿಗಳು ತೋರಿಸುವ ಬದುಕಿನ ದರ್ಶನ ಇಲ್ಲಿನ, ಎಲ್ಲ ಕಥೆಗಳ ಹಿಂದೆ ಸೂತ್ರದ ಎಳೆಯಾಗಿ ಮೂಡಿ ಬಂದಿದೆ. ಹಾಗಾಗಿ 'ಕಡಲು' ನಾಗವೇಣಿಯವರ ಕಥೆಗಳಲ್ಲಿ ಮುಖ್ಯ ಫೋಕಸ್ ಆಗುತ್ತದೆ.

ನಮ್ಮ ನಡುವಿನ ಸಮಾಜದ ಬದಲಾವಣೆಯ ಗತಿಯನ್ನು ತಮ್ಮ ಕತೆಗಳಲ್ಲಿ ಸೂಕ್ಷ್ಮವಾಗಿ ಸೆರೆ ಹಿಡಿದಿರುವ ಕತೆಗಾರ್ತಿ, ಆದರ ಲಯವನ್ನು ಅನುಭವವಾಗಿಸಿರುವ ರೀತಿ ಅದ್ಭುತವಾದದು. 'ದಾನ' ಕತೆಯಲ್ಲಿ ಗುತ್ತಿನ ಒಡೆಯರು ಕೊರಗರನ್ನು ನಡೆಸಿಕೊಳ್ಳುವ ರೀತಿ, ಅದಕ್ಕೆ ವಿದ್ಯಾವಂತ ಕೊರಗರ ಪ್ರತಿಭಟನೆಯನ್ನು ವಿವಿಧ ಸಾಮಾಜಿಕಸ್ತರದಲ್ಲಿ ಅದ್ಭುತವಾಗಿ ಕತೆಗಾರ್ತಿ ಗುರುತಿಸಿದ್ದಾರೆ. ನಿದಾನವಾಗಿಯಾದರೂ ಕೆಳಸ್ತರದ ಶೂದ್ರಾತಿ ಶೂದ್ರ ಸಮುದಾಯದಲ್ಲಿ ಉಂಟಾಗುತ್ತಿರುವ ಎಚ್ಚರ, ಸ್ವಾಭಿಮಾನದ ಹಂಬಲ - ಇವುಗಳನ್ನು ಗುರುತಿಸುವುದರೊಂದಿಗೆ ಸ್ಥಾಪಿತ ಸಾಮಾಜಿಕ ಮೌಲ್ಯಗಳ ವಿರುದ್ಧ ನಡೆಯುವ ಘರ್ಷಣೆ ಇಲ್ಲಿ ಕಲಾತ್ಮಕವಾಗಿ ಬಂದಿದೆ. ನಮ್ಮ ಶ್ರೇಣೀಕೃತ ಸಮಾಜದಲ್ಲಿ ಕಂಡು ಬರುವ ಅಪಮಾನ, ನೋವು, ಶೋಷಣೆಗಳ ಆಳದಲ್ಲಿ ಕ್ರೌರ್ಯದೊಂದಿಗೆ ಮೂಢನಂಬಿಕೆಯೂ ಹೆಗಲಿ ಗೇರಿರುವುದನ್ನು ಅತ್ಯಂತ ಸಮರ್ಥವಾಗಿ ಈ ಕತೆ ಬಿಚ್ಚಿಡುತ್ತದೆ.

ಈ ಸಂಕಲನದ ಕತೆಗಳು ದಕ್ಷಿಣ ಕನ್ನಡದ ಹಲವು ಶೂದ್ರ ಸಮುದಾಯಗಳ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವುದಕ್ಕಾಗಿ ಮತ್ತು ಆದಕ್ಕಿಂತಲೂ ಮುಖ್ಯವಾಗಿ ಮುಸ್ಲಿಂ ಮತ್ತು ಶೂದ್ರ ಸಮುದಾಯಗಳ ನಡುವಿನ ಒಡನಾಟ, ಅವರೊಳಗಿನ ಬಾಂಧವ್ಯ - ಇವುಗಳನ್ನು ವಿಶಿಷ್ಟ ಶೈಲಿಯಲ್ಲಿ ಕಟ್ಟಿಕೊಡುತ್ತವೆ. ಇಂದಿನ ಸಮಕಾಲೀನ ಬದುಕಿನಲ್ಲಿ ಏರುತ್ತಿರುವ

ಕೋಮುವಾದದ ಬಿಸಿಯ ಝಳವನ್ನು ಈ ಕೃತಿ ಗುರುತಿಸುತ್ತಲೇ ಕೋಮು ಸೌಹಾರ್ದದ ಹಲವು ಮುಖಗಳನ್ನು ಇಲ್ಲಿನ ಕತೆಗಳು ಪ್ರಕಟಿಸುತ್ತವೆ. 'ಮೀಯುವ ಆಟ', 'ತಾಯ್ತನ' ಮತ್ತು 'ಒಡಲು' - ಈ ಕತೆಗಳಲ್ಲಿ ಬರುವ ಮುಸ್ಲಿಂ ಪಾತ್ರಗಳು ಮತ್ತು ಅವರ ಅನುಭವಗಳು ಸಮಾಜದ ಸಮಗ್ರ ಅನುಭವಗಳಾಗುವಂತೆ ನಾಗವೇಣಿ ಸಹಜವಾಗಿ ಚಿತ್ರಿಸಿದ್ದಾರೆ. ಹಾಗೆಯೇ ಆ ಪಾತ್ರಗಳ ಮನದ ಒಳತೋಟಿಯನ್ನು ಸವಿವರವಾಗಿ ಚಿತ್ರಿಸುತ್ತಾರೆ. 'ತಾಯ್ತನ' ಕತೆಯ ಐಸ್ಲಂ ಬ್ಯಾರಿಯವರು ಕೋಮುದ್ವೇಷದ ವಿಷಯ ಜ್ವಾಲೆಯ ಬಿಸಿಯ ಅನುಭವ ಪಡೆದರೂ ಗಂಡನ ಸಾವಿನ ದಿನದಂದೇ ತನ್ನ ದುಃಖವನ್ನು ಮೀರಿ, ಇದ್ದತ್ ಆಚರಿಸುವುದನ್ನು ಮುಂದೂಡಿ ಮೈರೆ ಮೈಲ್ದಿಯ ಮಗಳು ಸುಂದರಿಯ ಹೆರಿಗೆ ಮಾಡಿಸಲು ಬರುವಲ್ಲಿ ಮಾನವೀಯತೆ ಮೆರೆಯುತ್ತಾರೆ.

ಇಲ್ಲಿನ ಕತೆಗಳ ಮೂಲ ಸೆಲೆ ಪ್ರಕೃತಿ ಮತ್ತು ಮನುಷ್ಯ ಸಂಬಂಧದ ಗಾಢತೆ. ಮುನ್ನುಡಿಯಲ್ಲಿ ಕತೆಗಾರ್ತಿ ಹೇಳಿಕೊಳ್ಳುವಂತೆ 'ಕಡಲ ಸೆರಗಲ್ಲಿ ಕೂತು ಬಾಲ್ಯವನ್ನು ತೂಗುತ್ತಿದ್ದ ನನಗೆ ಆ ನದಿ, ಆ ಗುಡ್ಡ, ಬಲಕ್ಕಿರುವ ತೋಡು, ಎಡಕ್ಕಿರುವ ಗದ್ದೆ ತೋಟಗಳು, ಹಿಂದಿರುವ ಕೆರೆ, ಅದರೊಳಗಿನ ಅಸಂಖ್ಯ ಪಕ್ಷಿರಾಶಿಗಳು, ಎಲ್ಲಕ್ಕಿಂತಲೂ ಮಿಗಿಲಾಗಿ ನನ್ನ ಮುಂದಿರುವ ಕಡಲು, ಅದರ ಒಡಲು, ಅಲ್ಲಿ ನಡೆಯುವ ಪ್ರಕೃತಿ ವ್ಯಾಪಾರ...... ಅವೆಲ್ಲವೂ ನನ್ನ ಬಾಲ್ಯ ಜೀವನದ ಪ್ರತೀಕ್ಷಣದ ಅಮೂಲ್ಯ ಒಡವೆಗಳೆಂದೇ ಅನಿಸಿದ್ದವು. ಈ ಒಡವೆಗಳಿಂದ ಅಲಂಕೃತವಾಗಿರುವ 'ಮೀಯುವ ಆಟ'ದ ಕಥೆಗಳಲ್ಲಿ ಪ್ರಕೃತಿ ಕೇವಲ ಬಾಹ್ಯ ಸಲಕರಣೆಯಾಗಿ ಮಾತ್ರ ಚಿತ್ರಿತವಾಗದೆ ಮನುಷ್ಯ ಸಂಬಂಧದ ವಿವಿಧ ಲಯಗಳನ್ನು ಸೂಚಿಸುವ ಧ್ವನಿಪೂರ್ಣ ಪ್ರಯತ್ನವಾಗಿ ಮೂಡಿ ಬಂದಿದೆ.

ನಾಗವೇಣಿಯವರ ಕಥನಗಳ ಮುಖ್ಯ ಒತ್ತು ಇರುವುದೇ ಹೃದಯದ ಭಾಷೆಗೆ ಧ್ವನಿ ಕೊಡುವುದರಲ್ಲಿ ಮತ್ತು ಅದನ್ನು ಎತ್ತಿ ಹಿಡಿಯುವುದರಲ್ಲಿ. ಇದನ್ನು ಅವರ ಬರಹದ ದರ್ಶನ ಕೂಡ ಎಂದು ಹೇಳಬಹುದು. ವ್ಯಕ್ತಿಗಳ ಬದುಕಿನ ಘನತೆಯನ್ನು ಎತ್ತಿ ಹಿಡಿಯುತ್ತಲೇ ಪ್ರೀತಿ, ಪ್ರೇಮಗಳಿಗೆ, ಅಂತಃಕರಣದ ಭಾವನೆಗಳಿಗೆ ಅವರು ಭಾಷ್ಯ ಬರೆಯಬಲ್ಲರು. 'ಮೀಯುವ ಆಟ' ಕಥೆಯಲ್ಲಿ ಖಾದ್ರಿಬ್ಯಾರಿಯವರ ಸಾವಿನ ನಂತರ ವೆಂಕಪ್ಪಶೆಟ್ಟರು ಮತ್ತು ಉಮ್ಮಕ್ಕವರ ವರ್ತನೆ, 'ದಾನ' ಕತೆಯಲ್ಲಿ ಕೇತು ಮತ್ತು ಅವನ ತಾಯಿ ಕೊರಗತಿಯ ವರ್ತನೆ 'ಒಡಲು' ಕತೆಯಲ್ಲಿ ಮಂಜು ಮರಕಾಲ್ತಿ ಮತ್ತು ಸೈಯದ್ದಿಯ ವರ್ತನೆ, ಹಾಗೂ 'ಜೀವಸೆಲೆ' ಕತೆಯಲ್ಲಿ ಥೆರೇಸಾ ಮತ್ತು ಹರಿ ಪ್ರಿಯ ಖಿಟ್ಯಾಳ ವರ್ತನೆ ಇವೆಲ್ಲವೂ ಹೃದಯದ ಭಾಷೆಯ ಪಾರಮ್ಯತೆಯನ್ನು ಎತ್ತಿ ಹಿಡಿಯುತ್ತದೆ.

ಸ್ವಾಭಿಮಾನಿ ಹೆಣ್ಣಿನ ಹಲವಾರು ಚಿತ್ರಗಳು ಈ ಕಥಾಸಂಕಲನದಲ್ಲಿದೆ. ಇವು ಮಾತಿನ ಮೂಲಕ ವೀರಾವೇಶದ ಪಾತ್ರಗಳಾಗಿ ಪ್ರತಿಭಟನೆಯ ಮಾದರಿಗಳಾಗದೆ ಅರ್ಥಪೂರ್ಣವಾದ ಮೌನದೊಂದಿಗೆ ಪರಿಣಾಮ ಬೀರುವ ಪಾತ್ರಗಳಾಗಿವೆ. 'ಧಣಿಗಳ ಬೆಳ್ಳಿಲೋಟ' ಕತೆಯ ಚಿನ್ನಮ್ಮ ತನ್ನ ಬದುಕಿನಲ್ಲಿ ಮಾನಾಪಮಾಗಳಿಗೆ ಕಾರಣವಾದ ಬೆಳ್ಳಿಯ ಲೋಟವನ್ನು ಕಡಲಿಗೆ ಎಸೆಯುವ ಕ್ರಿಯೆ ಅತ್ಯಂತ ಪರಿಣಾಮಕಾರಿಯಾಗಿದೆ. 'ಸೇವಂತಿ ಓಲೆ'ಯ ಸೇವಂತಿಯೂ ತನ್ನ ಪ್ರಿಯಕರ ತನಗೆ ಕೈಕೊಟ್ಟಾಗ ಅವನು ನೀಡಿದ ಹರಳಿನ ಓಲೆಯನ್ನು ನೇತ್ರಾವದಿ ನದಿಯ ಒಡಲಿಗೆ ಜಾರಿಸಿ ತನ್ನ ಸ್ವಾಭಿಮಾನದ ಕ್ರಿಯೆಗೆ ಮೆರಗು ನೀಡುತ್ತಾಳೆ. 'ಒಡಲು' ಕತೆಯ ಮಂಜುಮರಕಾಲ್ತಿ ಮೊಮ್ಮಗನ ಬದುಕಿಗೆ ಪ್ರೀತಿಯ ಸೆಲೆ ಕಂಡುಕೊಳ್ಳಲು ಸೈಯದ್ದಿ ಮತ್ತು ನಫೀಸಮ್ಮರನ್ನು ಬೆಂಬಲಿಸಿ, ಉಳಿಸಿಕೊಳ್ಳುವ ರೀತಿ ಅನನ್ಯವಾದದ್ದು.

'ಮೀಯುವ ಆಟ' ಕಥಾ ಸಂಕಲನದ ಎಲ್ಲ ಕತೆಗಳೂ ಶೂದ್ರಾದಿಶೂದ್ರರ ಚಿಂತನೆಗೆ, ಆಲೋಚನೆಗೆ ಬಾಯಿಕೊಟ್ಟಿವೆ. ಕನಸುಗಳನ್ನು ಸಾಕ್ಷಾತ್ಕರಿಸಿವೆ. ಅವರ ಚಿಂತನೆ ಸಮುದಾಯದ ಒಂದು ಭಾಗಕ್ಕೆ ಮಾತ್ರ ಸೀಮಿತವಾಗದೆ, ಜನ ಸಮುದಾಯದ ಎಲ್ಲರ ಅನುಭವಗಳೊಳಗೂ ಹಣಿಕಿಕ್ಕುವ ಪರಿ ನಾಗವೇಣಿಯವರಿಗೇ ವಿಶಿಷ್ಟವಾದದ್ದು. ಜಾತಿ, ಉಪಜಾತಿಗಳೊಳಗಿನ ಮತ್ತು ಧಾರ್ಮಿಕ ಆವರಣದ ಒಳಹೊಕ್ಕು ಅಲ್ಲಿನ ಸೂಕ್ಷ್ಮತೆಗಳನ್ನು, ವೈಶಿಷ್ಟ್ಯಗಳನ್ನು ಹೀರಿ ಅದನ್ನು ಕತೆಗಳ ಅನುಭವವಾಗಿಸಿರುವುದೇ ನಾಗವೇಣಿಯವರ ವಿಶೇಷತೆ. 'ಜೀವಸೆಲೆ' ಕತೆಯನ್ನು ಓದಿದಾಗ ಕಲ್ಕತ್ತೆಗೇ ಹೋಗಿ ಬಂದ ಸಾಂಸ್ಕೃತಿಕ ಅನುಭವವಾಗುವುದಲ್ಲದೆ ವ್ಯಕ್ತಿಯ ಘನತೆ ಮತ್ತು ಶ್ರೇಷ್ಠತೆ ಎಲ್ಲಿದೆ ? ಎಂಬ ಪ್ರಶ್ನೆಗೆ ನಮ್ಮನ್ನು ಯೋಚನೆಗೆ ತೊಡಗುವಂತೆ ಮಾಡುತ್ತದೆ.

ಕನ್ನಡ ಕಥಾ ಸಾಹಿತ್ಯ ಭಂಡಾರಕ್ಕೆ ನಾಗವೇಣಿಯವರ 'ಮೀಯುವ ಆಟ' ಒಂದು ಅತ್ಯುತ್ತಮ ಸೇರ್ಪಡೆಯೆಂದು ಹೇಳುವುದರೊಂದಿಗೆ ಇಂತಹ ಇನ್ನೂ ಹಲವಾರು ಕೃತಿಗಳು ಅವರಿಂದ ಕನ್ನಡದ ಓದುಗರಿಗೆ ಸಿಗುವಂತಾಗಲಿ, ಎಂದು ಈ ಸಂದರ್ಭದಲ್ಲಿ ಹಾರೈಸುತ್ತೇವೆ. ☐☐

- ಅಚಲ

*ಕಾನೂನು ಪರಿಚಯ - ಈ ಅಂಕಣದಲ್ಲಿ ಈ ಸಂಚಿಕೆಯಿಂದ ಶ್ರೀಮತಿ ಹೇಮಲತಾ ಮಹಿಷಿಯವರು ಕಾನೂನಿನ ಸರಳ ಪರಿಚಯ ಮಾಡಿಕೊಡಲಿದ್ದಾರೆ.*



# ವೈದ್ಯಕೀಯ ಗರ್ಭಪಾತ ಕಾನೂನು

*- ಹೇಮಲತಾ ಮಹಿಷಿ*

- **ಗರ್ಭಪಾತದ ಬಗ್ಗೆ ಕಾನೂನು ಇದೆಯೇ ? ಗರ್ಭಪಾತ ಮಾಡಿಸಿ ಕೊಳ್ಳುವುದು, ಮಾಡುವುದು ಅಪರಾಧವೆ ಅಥವಾ ಕಾನೂನು ಬದ್ಧವೇ ?**

1971ದಲ್ಲಿ ವೈದ್ಯಕೀಯ ಗರ್ಭಪಾತದ ಬಗ್ಗೆ ನಮ್ಮ ದೇಶದ ಪಾರ್ಲಿಮೆಂಟು ಕಾನೂನು ಮಾಡಿದೆ. ಈ ಕಾನೂನಿನ ಪ್ರಕಾರ ಅದರಲ್ಲಿರುವ ನಿಯಮಗಳನ್ನು ಅನುಸರಿಸಿ ಯಾರೇ ನೋಂದಾಯಿತ (ರಿಜಿಸ್ಟರ್ ಮಾಡಿಸಿಕೊಂಡ) ವೈದ್ಯರು ಗರ್ಭಪಾತ ಮಾಡುವುದು ಅಪರಾಧವಾಗುವುದಿಲ್ಲ. ಆದರೆ, ಆ ವೈದ್ಯರಿಗೆ ಪ್ರಸೂತಿ ಹಾಗೂ ಸ್ತ್ರೀ ರೋಗಗಳ ವಿಷಯದಲ್ಲಿ ತರಬೇತಿ, ಅನುಭವ ಇರಬೇಕು. ಅದೇ ರೀತಿ ಗರ್ಭಪಾತ ಮಾಡಿಸಿಕೊಳ್ಳುವುದೂ ಅಪರಾಧವಲ್ಲ.

- **ವೈದ್ಯರು ಒಬ್ಬ ಮಹಿಳೆ ತಮ್ಮ ಬಳಿ ಗರ್ಭಪಾತಕ್ಕಾಗಿ ಬಂದಾಗ ಯಾವ ವಿಷಯಗಳನ್ನು ಗಮನಿಸಬೇಕು, ನಿಯಮಗಳನ್ನು ಪಾಲಿಸಬೇಕು ?**

ಅ) ಗರ್ಭಧರಿಸಿ 12 ವಾರಗಳನ್ನು ದಾಟಿರಬಾರದು ಅಥವಾ

ಆ) ಗರ್ಭಧಾರಣೆಯಾಗಿ 12 ವಾರ ಕಳೆದಿದ್ದರೂ 20 ವಾರಗಳನ್ನು ದಾಟಿರಬಾರದು. ಈ ಪರಿಸ್ಥಿತಿಯಲ್ಲಿ ಇಬ್ಬರು ವೈದ್ಯರು ಆ ಮಹಿಳೆಯನ್ನು ಪರೀಕ್ಷಿಸಬೇಕಾಗುತ್ತದೆ. ಪರೀಕ್ಷೆಯಿಂದ ಆ ಗರ್ಭವನ್ನು ಹಾಗೆಯೇ ಮುಂದುವರಿಯಲು ಬಿಟ್ಟರೆ ಗರ್ಭಿಣಿಯ ಪ್ರಾಣಕ್ಕೆ ಅಪಾಯ ವಾಗುತ್ತದೆ ಅಥವಾ ಅವಳ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಹಾನಿ ಉಂಟಾಗುತ್ತದೆ ಎಂದು ಮನವರಿಕೆಯಾದರೆ ಅಥವಾ ಮಗು ಹುಟ್ಟಿದರೂ ದೈಹಿಕ ಅಥವಾ ಮಾನಸಿಕ ನ್ಯೂನತೆಯಿಂದ ಕೂಡಿ ಅಂಗವಿಕಲ ಮಗುವಾಗಿ ಹುಟ್ಟುತ್ತದೆ ಎಂದು ಆ ಇಬ್ಬರು ವೈದ್ಯರು ಅಭಿಪ್ರಾಯಕ್ಕೆ ಬಂದಾಗ ಮಾತ್ರ 12 ವಾರದಿಂದ 20 ವಾರದೊಳಗೆ ಗರ್ಭಪಾತ ಮಾಡಬಹುದು.

- **ದೈಹಿಕ ಆರೋಗ್ಯಕ್ಕೆ ಹಾನಿಯಾಗುವುದು ಎಂದರೆ ಅರ್ಥವಾಗುತ್ತದೆ. ಆದರೆ ಮಾನಸಿಕ ಆರೋಗ್ಯಕ್ಕೆ ಹಾನಿಯಾಗುವ ಉದಾಹರಣೆಗಳನ್ನು ತಿಳಿಸಿ.**

ಯಾವುದೇ ಮಹಿಳೆ ತನ್ನ ಮೇಲಾದ ಲೈಂಗಿಕ ಅತ್ಯಾಚಾರದ ಪರಿಣಾಮವಾಗಿ ಗರ್ಭ ಧರಿಸಿದ್ದೇನೆಂದು ಹೇಳಿದಾಗ ಮಾನಸಿಕ ಆರೋಗ್ಯಕ್ಕೆ ತೀವ್ರ ಹಾನಿ ಉಂಟಾಗುತ್ತದೆಂದು ಭಾವಿಸಬಹುದು.

ಅದೇ ರೀತಿ, ಆ ಮಹಿಳೆಯಾಗಲೀ ಅವಳ ಗಂಡನಾಗಲೀ ತಮಗೆ ಮಕ್ಕಳಾಗುವುದು ಬೇಡವೆಂದು ಸಂತಾನ ನಿಯಂತ್ರಣ ಸಾಧನವನ್ನು ಅಥವಾ ವಿಧಾನವನ್ನು ಬಳಸಿದಾಗಲೂ ಅದು ವಿಫಲವಾಗಿ ಮಹಿಳೆ ಗರ್ಭಿಣಿಯಾದರೆ, ಆ ಬೇಡದ ಗರ್ಭದಿಂದ ಉಂಟಾಗುವ ಮಾನಸಿಕ ಕ್ಲೇಶ ಆ ಮಹಿಳೆಯ ಮಾನಸಿಕ ಆರೋಗ್ಯಕ್ಕೆ ತೀವ್ರ ಹಾನಿ ಉಂಟು ಮಾಡುತ್ತದೆಂದು ಭಾವಿಸಬಹುದು.

- **ಇವೆರಡೇ ಕಾರಣಗಳಲ್ಲದೇ ಬೇರೆ ಹಲವಾರು ಕಾರಣಗಳಿಂದಲೂ ಗರ್ಭಿಣಿಯ ದೈಹಿಕ-ಮಾನಸಿಕ ಆರೋಗ್ಯಕ್ಕೆ ಆ ಗರ್ಭಧಾರಣೆಯಿಂದ ತೊಂದರೆ ಉಂಟಾಗಬಹುದಲ್ಲವೇ ?**

ಹೌದು. ಹಾಗೆಂದೇ ವೈದ್ಯರು ಗರ್ಭ ಮುಂದುವರಿಯಲು ಬಿಡಬೇಕೇ ಅಥವಾ ಬೇಡವೇ ಎಂದು ನಿರ್ಧರಿಸಲು (12 ರಿಂದ 20 ವಾರಗಳ ಒಳಗೆ) ಆ ಗರ್ಭಿಣಿ ಮಹಿಳೆ ಇರುವ ವಾತಾವರಣವನ್ನು ಅಥವಾ ಹತ್ತಿರದಲ್ಲಿ ಸೃಷ್ಟಿಯಾಗಬಹುದಾದ ಸನ್ನಿವೇಶವನ್ನು ಪರಿಗಣಿಸಬೇಕಾಗುತ್ತದೆ.

- **ಗರ್ಭಿಣಿ ಮಹಿಳೆಯ ಒಪ್ಪಿಗೆ ಇಲ್ಲದೆಯೂ ಗರ್ಭಪಾತ ಮಾಡಬಹುದೇ ?**

ಇಲ್ಲ. ಗರ್ಭಿಣಿ ಮಹಿಳೆಯ ಒಪ್ಪಿಗೆ ಇಲ್ಲದೇ ಗರ್ಭಪಾತ ಮಾಡುವುದು ಕಾನೂನಿಗೆ ವಿರುದ್ಧ. ಆದರೆ, ಆ ಮಹಿಳೆಗೆ 18 ವರ್ಷ ತುಂಬಿರದಿದ್ದರೆ ಅಥವಾ 18 ವರ್ಷ ತುಂಬಿದ್ದರೂ ಹುಚ್ಚಿಯಾಗಿದ್ದರೆ, ಅವಳ ಪೋಷಕರ ಒಪ್ಪಿಗೆಯನ್ನು ಬರವಣಿಗೆಯಲ್ಲಿ ಪಡೆಯಬೇಕು.

CPMG/KA/BG-8/2003-05

RNI No. 45577/88

*Posted at Basavanagudi P.O. On the 25th of every Month*

*September - 2005*

- **ಯಾವ ಸ್ಥಳದಲ್ಲಿಯಾದರೂ ಗರ್ಭಪಾತ ಮಾಡಬಹುದೇ ?**

ಇಲ್ಲ. ಸರ್ಕಾರ ಸ್ಥಾಪಿಸಿದ ಅಥವಾ ನೋಡಿಕೊಳ್ಳುತ್ತಿರುವ ಆಸ್ಪತ್ರೆಗಳಲ್ಲಿ ಅಥವಾ ಇದೇ ಉದ್ದೇಶಕ್ಕಾಗಿ ಸರ್ಕಾರದಿಂದ ಅನುಮತಿ ಪಡೆದಿರುವ ಸ್ಥಳಗಳಲ್ಲಿಯೇ ಮಾಡಬೇಕಾಗುತ್ತದೆ.

- **ತುರ್ತು ಪರಿಸ್ಥಿತಿ ಇದ್ದಾಗಲೂ ಎಲ್ಲಾ ನಿಯಮಗಳನ್ನು ವೈದ್ಯರು ಪಾಲಿಸಬೇಕಾಗುತ್ತದೆಯೇ ?**

ಅವಶ್ಯಕತೆ ಇಲ್ಲ. ಗರ್ಭಿಣಿ ಮಹಿಳೆಯ ಪ್ರಾಣವನ್ನುಳಿಸಲು ಗರ್ಭಪಾತವನ್ನು ತಕ್ಷಣವೇ ಮಾಡುವುದು ಅತ್ಯಂತ ಅವಶ್ಯಕವಾಗಿದೆ ಎಂಬ ತುರ್ತು ಪರಿಸ್ಥಿತಿ ಇದ್ದಾಗ ಯಾರೇ ನೋಂದಾಯಿತ ವೈದ್ಯರು ತಕ್ಷಣವೇ ಗರ್ಭಪಾತ ಮಾಡಿಸಲು ವೈದ್ಯಕೀಯ ಕ್ರಮ ಕೈಗೊಳ್ಳಬಹುದು. ಈ ಸಂದರ್ಭದಲ್ಲಿ ಇಬ್ಬರು ವೈದ್ಯರ ಅಭಿಪ್ರಾಯ ಪಡೆಯುವುದು ಅಥವಾ 20 ವಾರದ ಒಳಗಿನ ಗರ್ಭಧಾರಣೆಯಾಗಿರಬೇಕು ಎನ್ನುವುದು ಕಡ್ಡಾಯವಾಗಿರುವುದಿಲ್ಲ. ಹಾಗೆಯೇ ಆ ವೈದ್ಯರು ಪ್ರಸೂತಿ ಸ್ತ್ರೀ ರೋಗ ವಿಷಯದಲ್ಲಿ ತರಬೇತಿ ಅನುಭವ ಹೊಂದಿದವರೂ ಆಗಬೇಕಾಗಿಲ್ಲ. ಆ ಸಮಯದಲ್ಲಿ ಗರ್ಭಿಣಿ ಮಹಿಳೆಯ ಪ್ರಾಣ ಉಳಿಸುವುದೇ ಮುಖ್ಯ ಉದ್ದೇಶವಾಗಿರಬೇಕು ಹಾಗೂ ಆ ವೈದ್ಯರು ಸದ್ಭಾವನೆಯಿಂದ ನಿರ್ಣಯ ತೆಗೆದುಕೊಂಡಿರಬೇಕು.

- **ನೋಂದಾಯಿತ ವೈದ್ಯರೆಂದರೆ ಯಾರು? ಬೇರೆಯವರು ಗರ್ಭಪಾತ ಮಾಡಿದರೆ ಏನಾಗುತ್ತದೆ?**

ಭಾರತೀಯ ವೈದ್ಯಕೀಯ ಮಂಡಳಿಯು ಮಾನ್ಯತೆ ನೀಡಿದ ಯಾವುದೇ ವೈದ್ಯಕೀಯ ವಿದ್ಯಾರ್ಹತೆ ಹೊಂದಿರುವವರು ಮತ್ತು ರಾಜ್ಯದ ವೈದ್ಯಕೀಯ ರಿಜಿಸ್ಟರ್‌ನಲ್ಲಿ ತಮ್ಮ ಹೆಸರನ್ನು ನೋಂದಣಿ ಮಾಡಿಕೊಂಡಿರುವವರು, ಕಾನೂನಿನ ಪ್ರಕಾರ ಪ್ರಸೂತಿಶಾಸ್ತ್ರ ಮತ್ತು ಸ್ತ್ರೀ ರೋಗ ವಿಷಯಗಳಲ್ಲಿ ತರಬೇತಿ ಅನುಭವ ಹೊಂದಿರುವವರು ನೋಂದಾಯಿತ ವೈದ್ಯರಾಗಿರುತ್ತಾರೆ. ಇದು ಯಾವುದೂ ಇಲ್ಲದ ವ್ಯಕ್ತಿಗಳು ಗರ್ಭಪಾತ ಮಾಡಿದರೆ ಭಾರತೀಯ ದಂಡ ಸಂಹಿತೆಯ ಪ್ರಕಾರ ಅಪರಾಧವಾಗುತ್ತದೆ. ಅವರಿಗೆ ಸೆರೆವಾಸದ ಹಾಗೂ ದಂಡದ ಶಿಕ್ಷೆಯಾಗುತ್ತದೆ.

ಮಹಿಳೆಯರು ತಮ್ಮ ಆರೋಗ್ಯ-ಪ್ರಾಣದ ರಕ್ಷಣೆಗಾಗಿ ಖೊಟ್ಟಿ ವೈದ್ಯರ ಬಳಿ ಖಂಡಿತಾ ಹೋಗಬಾರದು. ❑❑

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri